ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕಮಾಲೆ—೪೨೯

# ಲಕ್ಷ್ಮೀಶ

ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ.




ಮೈಸೂರು:
ಮೈಸೂರು ವಿಶ್ವವಿದ್ಯಾನಿಲಯ
೧೯೫೫

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚು ವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕ ಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್‌ಸೆಲರ್ ಪದವಿಯಿಂದ ಈಗ ತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯ ಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು; ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವುದನ್ನು

ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದುಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು ಮುಗಿಸುವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗಬಲ್ಲುದು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು, ತಾ|| ೨೪-೪-೧೯೪೨.

ಇ. ಜಿ. ಮೆಕಾಲ್ಪೈನ್
ವೈಸ್-ಛಾನ್ಸೆಲರ್

# ಅರಿಕೆ

ಲಕ್ಷ್ಮೀಶ ಕವಿಯ ವಿಷಯವಾಗಿ ಹಾಸನದಲ್ಲಿ ಕೊಟ್ಟ ಉಪನ್ಯಾಸವನ್ನು ವಿಸ್ತರಿಸಿ ಈ ಪುಸ್ತಕರೂಪವಾಗಿ ಪ್ರಕಟಿಸಿದೆ. ಸಾಮಾನ್ಯ ಜನರಿಗೆ ಲಕ್ಷ್ಮೀಶ ಕವಿಯ ಪರಿಚಯ ಮಾಡಿ ಕೊಡುವುದೇ ಇದರ ಮುಖ್ಯೋದ್ದೇಶ. ಕವಿಯ ಮತ್ತು ಕಾವ್ಯದ ವಿಷಯವಾಗಿ ಯಾವ ಚರ್ಚೆಗೂ ಕೈಹಾಕದೆ ಅವುಗಳ ಸ್ಥೂಲ ವಿಮರ್ಶೆಯನ್ನು ಮಾತ್ರ ಇಲ್ಲಿ ಪ್ರಯತ್ನಿಸಿದೆ. ಸಾಧ್ಯವಾದ ಮಟ್ಟಿಗೂ ಮೊದಲಿಂದ ಕೊನೆಯ ವರೆಗೂ ಸಂಸ್ಕೃತ ಜೈಮಿನಿಭಾರತಕ್ಕೂ ಲಕ್ಷ್ಮೀಶನ ಗ್ರಂಥಕ್ಕೂ ಇರುವ ಸಂಬಂಧವನ್ನು ಅಲ್ಲಲ್ಲೆ ಸಂಗ್ರಹವಾಗಿ ಸೂಚಿಸಿದೆ. ಇದು ಸಂಕಲನವೂ ಅಹುದು. ವಿಮರ್ಶೆಯೂ ಅಹುದು. ವಾಚಕರು ಎಚ್ಚರಿಕೆಯಿಂದ ಓದಿದ ಪಕ್ಷದಲ್ಲಿ ಕವಿಯ ಸಾಮಾನ್ಯ ಪರಿಚಯವಾಗುವುದಲ್ಲದೆ ಕಾವ್ಯದ ವಿಷಯವಾದ ಹೆಚ್ಚಿನ ವ್ಯಾಸಂಗಕ್ಕೂ ಆಸಕ್ತಿಯುಂಟಾಗಬಹುದು.

ಈ ಪುಸ್ತಕದ ಮೂಲಪ್ರತಿಯನ್ನು ಓದಿ ಅನೇಕ ಸಲಹೆಗಳನ್ನು ಕೊಟ್ಟು ಸಹಾಯಮಾಡಿದ ನನ್ನ ಮಿತ್ರರಾದ ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರಿಗೂ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರವರಿಗೂ ಸಂಪಾದಕಮಂಡಲಿಗೂ ಇದನ್ನು ಪ್ರಕಟಿಸಿದ ಮೈಸೂರು ವಿಶ್ವವಿದ್ಯಾನಿಲಯಕ್ಕೂ ನಾನು ತುಂಬಾ ಕೃತಜ್ಞನಾಗಿದ್ದೇನೆ.

ಲಕ್ಷ್ಮೀಶನ ವಿಷಯವಾಗಿ ಈಗಾಗಲೇ ಅನೇಕ ಗ್ರಂಥಗಳೂ ಲೇಖನಗಳೂ ಪ್ರಕಟವಾಗಿವೆ. ವಾಚಕರ ಸೌಕರ್ಯಕ್ಕಾಗಿ ಅವುಗಳ ಸಣ್ಣ ಪಟ್ಟಿಯೊಂದನ್ನು ಮುಂದೆ ಕೊಟ್ಟಿದೆ. ಈ ಗ್ರಂಥರಚನೆಯಲ್ಲಿ ಅವುಗಳಿಂದ ನನಗಾದ ಸಹಾಯವನ್ನು ನಾನು ಸಂತೋಷದಿಂದ ಸ್ಮರಿಸುತ್ತೇನೆ.

ಮಹಾರಾಜರವರ ಕಾಲೇಜು, ಮೈಸೂರು

ಸ್ವಭಾನು|| ಚೈ||ಶು|| ೧ — ಎನ್. ಅನಂತರಂಗಾಚಾರ್.

# ವಿಷಯಾನುಕ್ರಮಣಿಕೆ

# ಮುಂದೆ ಓದಲು ಸೂಚನೆ

೧. ಸಂಸ್ಕೃತ ಜೈಮಿನಿಭಾರತ

ವೆಂಕಟೇಶ್ವರ ಮುದ್ರಣಾಲಯ, ಬೊಂಬಾಯಿ.

೨. ಕನ್ನಡ ಜೈಮಿನಿಭಾರತ

(i) ಪಿ. ಆರ್. ಕರಿಬಸಪ್ಪಶಾಸ್ತ್ರಿಗಳಿಂದ ಪರಿಷ್ಕೃತವಾದುದು.

(ii) ಕೆ. ನಂಜುಂಡಶಾಸ್ತ್ರಿಗಳಿಂದ ಪರಿಶೋಧಿತವಾದುದು.

(iii) ಸರಸ್ವತೀ ತಿರುವೇಂಕಟಾಚಾರ್ಯರೇ ಮೊದಲಾದವರಿಂದ ಮುದ್ರಿತವಾದುದು.

೩. ಸಂಸ್ಕೃತ ಜೈಮಿನಿಭಾರತದ ಕನ್ನಡದ ಅನುವಾದ

ಲೇಖಕರು : ಶ್ರೀ ಕಡಬದ ನಂಜುಂಡಶಾಸ್ತ್ರಿಗಳು.

(ಪರಿಷತ್ಪತ್ರಿಕೆ ೧೪ ರಿಂದ ೨೦ ನೆಯ ಸಂಪುಟಗಳಲ್ಲಿ ಪ್ರಕಟವಾಗಿದೆ)

೪. ಕನ್ನಡ ಜೈಮಿನಿಭಾರತದ ಗದ್ಯಾನುವಾದ

ಲೇಖಕರು : ಶ್ರೀ ಆರ್. ರಾಮರಾಯರು.

೫. ಕವಿ ಲಕ್ಷ್ಮೀಶ

ಪ್ರಕಾಶಕರು : ಚಿಕ್ಕಮಗಳೂರಿನ ಕರ್ಣಾಟಕ ಸಂಘ

# ಲೇಖನಗಳು

ಶ್ರೀಗಳಾದ

ಟಿ. ಎಸ್. ವೆಂಕಣ್ಣಯ್ಯ : 'ಲಕ್ಷ್ಮೀಶ'

(ಪರಿಷತ್ಪತ್ರಿಕೆ, V-೧)

ರಾಜಪುರೋಹಿತರು : 'ಲಕ್ಷ್ಮೀಶ ಕವಿ'

(ಪರಿಷತ್ಪತ್ರಿಕೆ, VIII-೪)

'ಶಿವರಾಮ': 'ರತ್ನಾಕರವರ್ಣಿಯೂ ಲಕ್ಷ್ಮೀಶನೂ'

(ಪರಿಷತ್ಪತ್ರಿಕೆ, XIV-೩)

ಬೆಟಗೇರಿಯವರು : 'ಲಕ್ಷ್ಮೀಶ'

(ಸುಬೋಧ, ಜೂನ್, ೧೯೩೯)

ಐ. ಶಿವರಾಮಯ್ಯ : 'ಲಕ್ಷ್ಮೀಶನೂ ಜೈಮಿನಿಭಾರತವೂ'

(ವಸಂತ, ಆಗಸ್ಟ್, ೧೯೨೯)

ಎಂ. ಗೋವಿಂದ ಪೈ : 'ಲಕ್ಷ್ಮೀಶನ ಕಾಲ ಮತ್ತು ಸ್ಥಳ'

(ಕರ್ನಾಟಕ ಕೇಸರಿ, ಸಂಪುಟ ೨, ಸಂಚಿಕೆ ೨-೫)

ಆರ್. ನರಸಿಂಹಾಚಾರ್ : 'ಲಕ್ಷ್ಮೀಶ'

(ಕರ್ನಾಟಕ ಕವಿಚರಿತ್ರೆ, ೩ ನೆಯ ಸಂಪುಟದ ಉಪೋದ್ಘಾತ)

ಆರ್. ವ್ಹಿ. ಜಾಗೀರದಾರ : 'ಜೈಮಿನಿಭಾರತ' (ವಿಹಾರ ವಿಮರ್ಶೆ)

(ಪರಿಷತ್ಪತ್ರಿಕೆ, XXVII, ೧-೨)

ವಿ. ಸೀತಾರಾಮಯ್ಯ : 'ವಾದಭೂಮಿ'

(ಪರಿಷತ್ಪತ್ರಿಕೆ, XXVII-೨)

ಕುವೆಂಪು : 'ಸೀತಾವನವಾಸ'

# ಲಕ್ಷ್ಮೀಶ

## ಮುನ್ನುಡಿ

ರಾಮಾಯಣ ಮಹಾಭಾರತಗಳು ಭರತಖಂಡದ ಪೂಜ್ಯ ಗ್ರಂಥಗಳು. ಅವುಗಳ ಪ್ರಭಾವವು ಭಾರತೀಯರ ಮೇಲೆ ವಿಶೇಷವಾಗಿದೆ. ಅವುಗಳ ಸವಿಯನ್ನರಿತಷ್ಟೂ ಅವನ್ನು ಮತ್ತಷ್ಟೂ ಸವಿಯಬೇಕೆಂಬಾಸೆ ಯಾವ ಭಾರತೀಯನಿಗಾದರೂ ಬಾರದಿರದು. ಅದರಲ್ಲಿಯೂ ಪೌರಾಣಿಕದೃಷ್ಟಿಯಿಂದಲೂ ಧರ್ಮವಿಚಾರದೃಷ್ಟಿಯಿಂದಲೂ ರಾಮಾಯಣಕ್ಕಿಂತ ಭಾರತಕ್ಕೆ ಹೆಚ್ಚು ಪ್ರಾಶಸ್ತ್ಯ. ಭಾರತವು ಪ್ರಥಮತಃ ಪಾಂಡವ ಕೌರವ ಚರಿತ್ರೆಯಾದರೂ—ಭರತವಂಶದ ರಾಜರುಗಳ ಚರಿತ್ರಕಥನವೇ ಅದರ ಪ್ರಧಾನವಸ್ತುವಾದರೂ—ಅದು ಧರ್ಮದ ಗಣಿ; ನೀತಿಯ ಸಾಗರ; ರಾಜತಂತ್ರದ ನೆಲೆವೀಡು; ಲೋಕವ್ಯವಹಾರದ ಕೈಪಿಡಿ. ಆದುದರಿಂದಲೇ ಅದಕ್ಕೆ ಪಂಚಮವೇದವೆಂಬ ಪ್ರಸಿದ್ಧಿ ಯುಂಟಾಗಿರುವುದು.

ವ್ಯಾಸರಚಿತವಾದ ಸಂಸ್ಕೃತ ಮಹಾಭಾರತದ ಫಲವನ್ನು ಸರ್ವತೋಮುಖವಾಗಿ ಅನುಭವಿಸಬೇಕೆಂದು ಬೇರೆ ಬೇರೆಯ ಭಾಷೆಯವರು ಬಹು ಹಿಂದಿನ ಕಾಲದಿಂದಲೂ ಅದರ ಮುಖ್ಯ ಮುಖ್ಯ ಭಾಗಗಳನ್ನೂ ಪೂರ್ಣಕಥೆಯನ್ನೂ ತಮ್ಮ ತಮ್ಮ ಭಾಷೆಗೆ ಪರಿವರ್ತಿಸಿಕೊಂಡಿದ್ದಾರೆ. ಆ ಮಹಾಸಮುದ್ರದ ಅಮೃತವನ್ನು ತಮ್ಮ ಪಾತ್ರೆ ಹಿಡಿಯುವಷ್ಟು ತುಂಬಿಕೊಂಡು ತಮ್ಮ ಜನಗಳಲ್ಲಿ ಹಂಚಿದ್ದಾರೆ. ಕನ್ನಡ ಭಾಷೆಯಲ್ಲಿಯೂ ಈ

ಕಾರ್ಯವು ಬಹುಕಾಲಕ್ಕೆ ಹಿಂದೆಯೇ ಪ್ರಾರಂಭವಾಗಿರಬೇಕು. ಕ್ರಿ. ಶ. ಹತ್ತನೆಯ ಶತಮಾನಕ್ಕೆ ಹಿಂದೆಯೇ ಕನ್ನಡ ಭಾರತ ಗಳಿದ್ದುವೆಂಬುದಕ್ಕೆ ಪಂಪನ ಹೇಳಿಕೆ ಸಾಕ್ಷಿ. 'ವಿಕ್ರಮಾರ್ಜುನ ವಿಜಯ' ವಾದ ಮೇಲೆ 'ಸಾಹಸ ಭೀಮವಿಜಯ,' 'ನೇಮಿನಾಥ ಪುರಾಣ,' 'ಗದುಗಿನ ಭಾರತ,' 'ಜಯುಣಭಾರತ,' 'ಚಿತ್ರ ಭಾರತ' ಮೊದಲಾದ ಅನೇಕ ಕನ್ನಡ ಗ್ರಂಥಗಳಲ್ಲಿ ಭಾರತದ ಕಥೆಯು ನಾನಾ ರೀತಿಯಾಗಿ ವರ್ಣಿತವಾಗಿದೆ. ಸನ್ನಿವೇಶಕ್ಕೂ ಉದ್ದೇಶಕ್ಕೂ ತಕ್ಕಂತೆ ಮಾರ್ಪಾಟಾಗಿದೆ. ವಿವಿಧ ಮತಾನು ಯಾಯಿಗಳ ಆವಶ್ಯಕತೆಗನುಗುಣವಾಗಿ ಹಿರಿದಾಗಿ ಕಿರಿದಾಗಿ ಹೊಸ ವಿಷಯಗಳನ್ನು ಸೇರಿಸಿಕೊಂಡು ಇದ್ದುದನ್ನು ಬಿಟ್ಟು ಅಥವಾ ವ್ಯತ್ಯಾಸಪಡಿಸಿಕೊಂಡು ರೂಪಾಂತರವನ್ನು ಹೊಂದಿದೆ.

ಹನ್ನೆರಡನೆಯ ಶತಮಾನದಲ್ಲಿ ರಾಮಾನುಜಾಚಾರ್ಯರೂ ಹದಿಮೂರನೆಯ ಶತಮಾನದಲ್ಲಿ ಮಧ್ವಾಚಾರ್ಯರೂ ಉಪ ದೇಶಮಾಡಿದುದರ ಫಲವಾಗಿ ವೈಷ್ಣವಮತಗಳು ಕರ್ಣಾ ಟಕದಲ್ಲಿ ವಿಶೇಷವಾಗಿ ಹರಡಿದುವು. ಕರ್ಣಾಟಕದ ಜೈನ ವೀರಶೈವರಂತೆ ವೈಷ್ಣವರೂ ತಮ್ಮ ಮತಪ್ರಚಾರಕಾರ್ಯದಲ್ಲಿ ದೇಶಭಾಷೆಯ ಸ್ಥಾನವನ್ನು ಬಹು ಬೇಗ ಅರಿತು ತಮ್ಮ ಕಾರ್ಯಸಾಧನೆಗಾಗಿ ಕನ್ನಡದಲ್ಲಿ ಗ್ರಂಥಗಳನ್ನು ರಚಿಸಲು ಮೊದಲುಮಾಡಿದರು. ಹದಿನೈದು ಹದಿನಾರನೆಯ ಶತಮಾನ ಗಳಲ್ಲಿ ಮಧ್ವಾಚಾರ್ಯರ ಅನುಯಾಯಿಗಳನೇಕರು ದಾಸಕೂಟ ವೆಂಬ ಸಂಸ್ಥೆಯೊಂದನ್ನು ಸ್ಥಾಪಿಸಿಕೊಂಡು ವಿಷ್ಣುಭಕ್ತಿಪ್ರತಿ ಪಾದಕಗಳಾದ ಅನೇಕ ಗ್ರಂಥಗಳನ್ನು ದೇಶಭಾಷೆಯಾದ ಕನ್ನಡದಲ್ಲಿ ರಚಿಸಿದರು. ಈ ಸಂದರ್ಭದಲ್ಲಿ ಭಾರತ ಭಾಗವತಗಳು ಅಗ್ರಸ್ಥಾನವನ್ನು ಪಡೆದವು. ಬಹುಶಃ ಈ ಉದ್ದೇಶದಿಂದಲೇ (ದಾಸಕೂಟಕ್ಕೆ ಸೇರಿದವರಲ್ಲದಿದ್ದರೂ) ಮೊದಲು ಕುಮಾರ

ವ್ಯಾಸನೂ ಕೆಲವು ಕಾಲವಾದ ಮೇಲೆ 'ನಿತ್ಯಾತ್ಮಶುಕ'ನೆಂಬ ಬಿರುದುಳ್ಳ ಸದಾನಂದಯೋಗಿಯೂ ಭಾರತ ಭಾಗವತಗಳನ್ನು ರಚಿಸಿದುದು. ಆದಿಕಾಲದಲ್ಲಿ ಭಾರತದ ಕಥಾವಸ್ತು ಪಾಂಡವ ಕೌರವರ ಚರಿತ್ರೆ ಮಾತ್ರ. ವೈಷ್ಣವರು ಭಾರತವನ್ನು ರಚಿಸುವುದಕ್ಕೆ ಪ್ರಾರಂಭಿಸಲು ಕ್ರಮಕ್ರಮವಾಗಿ ಅದರ ಸ್ವರೂಪವು ವ್ಯತ್ಯಾಸವಾಯಿತು. ನಾಯಕತ್ವವು ಪಾಂಡವರಿಂದ ಕೃಷ್ಣನಿಗೆ ಬದಲಾವಣೆಯಾಗುತ್ತ ಬಂದಿತು. ಇತಿಹಾಸವಾಗಿದ್ದುದು ಪುರಾಣವಾಗ ತೊಡಗಿತು. ಭಾರತವು ವಾಸ್ತವವಾಗಿ ಭಾಗವತವಾಗಲು ಮೊದಲಾಯಿತು. ಈ ಚಿಹ್ನೆಗಳನ್ನು ಕುಮಾರವ್ಯಾಸನಲ್ಲಿಯೇ ನೋಡಬಹುದು. ಅವನು ಭಾರತ ಕಥಾಮಂಜರಿಯನ್ನು ಬರೆದರೂ ಅದು ಕೃಷ್ಣಚರಿತಾಮೃತವೇ! ಅಲ್ಲಿ ಬರುವ ಪಾಂಡವರೇ ಮೊದಲಾದ ವ್ಯಕ್ತಿಗಳೂ ಕೃಷ್ಣನ ಇಚ್ಛೆಯಂತೆ ಅವನ ಲೀಲಾವಿಭೂತಿಗನುಗುಣವಾಗಿ ನಡೆಯತಕ್ಕವರು. ಅವರ ಮೇಲ್ಮೆ ಕೀಳ್ಮೆಗಳಿಗೆಲ್ಲ ಅವನೇ ಕಾರಣ.

ಈ ಪಂಥದಲ್ಲೇ ಬೆಳೆದು ಈ ಉದ್ದೇಶದಿಂದಲೇ ಗ್ರಂಥ ರಚನೆಯನ್ನು ಮಾಡಿರುವವನು ಕರ್ಣಾಟಕವಿಚೂತವನಚೈತ್ರನಾದ ಲಕ್ಷ್ಮೀಶಕವಿ. ಇವನು ಶ್ರೀಕೃಷ್ಣನ ಅನನ್ಯಸಾಧಾರಣ ಶಕ್ತಿಯನ್ನೂ ಪರಾತ್ಪರತೆಯನ್ನೂ ವಿಶದಪಡಿಸುವುದಕ್ಕಾಗಿ ಜೈಮಿನಿಋಷಿಯಿಂದ ಸಂಸ್ಕೃತದಲ್ಲಿ ರಚಿತವಾದ ಜೈಮಿನಿ ಭಾರತದ ಆಧಾರದ ಮೇಲೆ ಕನ್ನಡದಲ್ಲಿ ಒಂದು ಮಹಾಕಾವ್ಯವನ್ನು ರಚಿಸಿ ಪ್ರಸಿದ್ಧನಾಗಿದ್ದಾನೆ.

---

# ಸಂಸ್ಕೃತ ಜೈಮಿನಿಭಾರತ

ಸಂಸ್ಕೃತ ಜೈಮಿನಿಭಾರತವು ಯಾವ ಕಾಲದಲ್ಲಿ ರಚಿತ ವಾಯಿತೆಂಬುದನ್ನು ನಿರ್ಧರವಾಗಿ ಹೇಳಲು ಸಾಧ್ಯವಿಲ್ಲ. ಹದಿನೈದನೆಯ ಶತಮಾನದ ಅಂತ್ಯಭಾಗದಲ್ಲಿ ವಿಜಯನಗರದ ದೊರೆಯಾಗಿದ್ದ ಸಾಳುವ ನರಸಿಂಹನ ಆಜ್ಞೆಯ ಪ್ರಕಾರ ಅವನ ಆಸ್ಥಾನ ಕವಿಯಾದ ಪಿಲ್ಲಲಮರ್ರಿ ಪಿನವೀರಭದ್ರನು ಸಂಸ್ಕೃತ ಜೈಮಿನಿಭಾರತ ಪುರಾಣವನ್ನು ತೆಲುಗು ಭಾಷೆಗೆ ಪರಿವರ್ತಿಸಿದನೆಂದು ಗೊತ್ತಾಗುವುದರಿಂದ ಆ ಕಾಲಕ್ಕೆ ಹಿಂದೆಯೇ ಸಂಸ್ಕೃತ ಜೈಮಿನಿಭಾರತವಿದ್ದಿರಬೇಕು. ಎಷ್ಟು ಹಿಂದೆ ಇದ್ದಿತೆಂದು ಹೇಳಲು ಸರಿಯಾದ ಆಧಾರಗಳಿಲ್ಲ. ಸಂಸ್ಕೃತ ಜೈಮಿನಿಭಾರತವು ವ್ಯಾಸಭಾರತಕ್ಕೆ ಸಮಕಾಲೀನವಾದುದೆಂದು ಸೂಚಿಸುವ ಅನೇಕ ದಂತಕಥೆಗಳಿವೆ. ವ್ಯಾಸರಚಿತವಾದ ಮಹಾಭಾರತವನ್ನು ವೈಶಂಪಾಯನನ ಮುಖದಿಂದ ಕೇಳಿದರೂ ಜನಮೇಜಯರಾಯನಿಗೆ ಸರ್ಪಹತ್ಯಾದೋಷದಿಂದುಂಟಾದ ಕುಷ್ಠರೋಗವು ಪೂರ್ಣವಾಗಿ ನಿವಾರಣೆಯಾಗದಿರಲು ವ್ಯಾಸರ ಶಿಷ್ಯರಾದ ಜೈಮಿನಿ ಋಷಿಗಳು ತಾವು ಬೇರೊಂದು ಭಾರತವನ್ನು ರಚಿಸಿ ಅದರ ಶ್ರವಣದಿಂದ ಜನಮೇಜಯರಾಯನಿಗೆ ರೋಗನಿವಾರಣೆಮಾಡಿದರೆಂದೂ ಆ ಭಾರತವನ್ನೇ ಜೈಮಿನಿಯು ತಮ್ಮ ಗುರುಗಳಾದ ವ್ಯಾಸರ ಅವಗಾಹನೆಗಾಗಿ ಅವರ ಮುಂದಿಡಲು ಅವರು ಅದರಲ್ಲೆಲ್ಲ ಸ್ವಾರಸ್ಯವಾದ ಅಶ್ವಮೇಧ ಪರ್ವವನ್ನು ಮಾತ್ರ ಉಳಿಸಿಕೊಂಡು ಮಿಕ್ಕವನ್ನು ಸಮುದ್ರದಲ್ಲೆಸೆದರೆಂದೂ ಒಂದು ಕಥೆಯಿದೆ. ಇದೇ ಕಥೆಯು, ವ್ಯಾಸಮುನಿಗಳು ತಮ್ಮ ಗ್ರಂಥವೆಲ್ಲಿ ಮೂಲೆಗೆ ಬೀಳುವುದೋ ಎಂಬ ಭಯದಿಂದ ಜೈಮಿನಿ ರಚಿತವಾದ ಭಾರತವನ್ನು ಸಮುದ್ರಕ್ಕೆಸೆ

ಯಲು ಎಲ್ಲ ಭಾಗವೂ ಮುಳುಗಿಹೋಗಿ ಅಶ್ವಮೇಧ ಪರ್ವ ಮಾತ್ರ ಶೇಲಿಬಂದುದನ್ನು ನೋಡಿ ಅದನ್ನು ಆಶೀರ್ವದಿಸಿದ ರೆಂಬ ಬೇರೊಂದು ರೂಪದಲ್ಲಿಯೂ ಸಿಕ್ಕುತ್ತದೆ. ಆದರೆ ಇವೆಲ್ಲ ಕಥೆಗಳು ಮಾತ್ರ.

ಬಂಧುಗಳನ್ನು ಕೊಂದ ಪಾಪವನ್ನು ಹೋಗಲಾಡಿಸಿ ಕೊಳ್ಳುವುದಕ್ಕಾಗಿ ಪಾಂಡವರು ಅಶ್ವಮೇಧಯಾಗವನ್ನು ಮಾಡಿದ ಕಥೆ ಜೈಮಿನಿಭಾರತದ ಕಥಾವಸ್ತು. ಇದೇ ವಿಷಯವು ವ್ಯಾಸಭಾರತದ ಆಶ್ವಮೇಧಿಕ ಪರ್ವದಲ್ಲಿಯೂ ಉಕ್ತವಾಗಿದೆ. ಆದರೆ ಈ ಎರಡು ಕಥೆಗಳಿಗೂ ವಿಶೇಷ ಸಾಮ್ಯವಿಲ್ಲ. ವ್ಯಾಸ ಭಾರತದಲ್ಲಿ ಪಾಂಡವ ಕೌರವರ ಯುದ್ಧಸಂಗತಿಯೇ ಪ್ರಧಾನ ವಸ್ತು. ಅಲ್ಲಿಂದ ಮುಂದೆ ಬರುವ ವಿಷಯಗಳು ಪ್ರಾಸಂಗಿಕ. ಜೈಮಿನಿಭಾರತದಲ್ಲಾದರೋ ಅಶ್ವಮೇಧದ ಕಥೆಯು ಒಂದು ನೆಪಮಾತ್ರ. ಕವಿಯು ಇಲ್ಲಿ ವರ್ಣಿಸಬೇಕೆಂದಿರುವುದು ಕೃಷ್ಣನ ಮತ್ತು ಕೃಷ್ಣಭಕ್ತರ ಮಾಹಾತ್ಮ್ಯವನ್ನು. ಅವನೇ ಅದನ್ನು 'ಕೃಷ್ಣಚರಿತಾಮೃತಂ' ಎಂದು ಕರೆದಿದ್ದಾನೆ. ಅಲ್ಲಿ ಬರುವ ಹಂಸಧ್ವಜ, ಸುಧನ್ವ, ತಾಮ್ರಧ್ವಜ, ವೀರವರ್ಮ ಮೊದಲಾ ದವರು ಪರಮ ವೈಷ್ಣವರು. (ಇವರ ಹೆಸರುಗಳು ಮಹಾಭಾರತ ದಲ್ಲಾಗಲಿ ಮತ್ತಾವ ಪುರಾಣದಲ್ಲಾಗಲಿ ಉಕ್ತವಾಗಿರುವಂತೆ ಕಾಣುವುದಿಲ್ಲ.) ಅವರು ಅರ್ಜುನನನ್ನು ಎದುರಿಸುವುದು ಕೃಷ್ಣ ದರ್ಶನವಾಗುವುದೆಂಬ ಆಶೆಯಿಂದಲೇ. ಅರ್ಜುನನಿಗೆ ಅವರನ್ನು ಗೆಲ್ಲುವುದು ಸುಲಭಸಾಧ್ಯವಾದ ಕಾರ್ಯವಲ್ಲ. ಅಂತಹ ಸಂದರ್ಭಗಳಲ್ಲೆಲ್ಲ ಕೃಷ್ಣನು ತನ್ನ ಭಕ್ತಶ್ರೇಷ್ಠನಾದ ಅರ್ಜುನನಿಗೆ ಸಹಾಯವಾಗಿ ಬಂದು ಅವನ ಪ್ರತಿಕಕ್ಷಿಗಳನ್ನು ಜಯಿಸಿ ಅವನ ಕಷ್ಟವನ್ನು ಪರಿಹಾರಮಾಡುವನು. ಅಹಂಕಾರದಿಂದ ಆ ಸ್ವಾಮಿಯನ್ನು ಮರೆತಾಗಲೆಲ್ಲ ಅವನಿಗೆ ಕಷ್ಟವೊದಗಿ ಪುನಃ

ಅವನ ಅನುಗ್ರಹದಿಂದಲೇ ಪರಿಹಾರವಾಗುವುದು. ಗ್ರಂಥದ ಮೊದಲಿಂದ ಕೊನೆಯ ವರೆಗೆ ಅಲ್ಲಲ್ಲಿ ವಿಷ್ಣುಮಹಿಮೆಯೂ ವಿಷ್ಣು ಭಕ್ತಿಗೆ ಅಂಗವಾದ ಏಕಾದಶೀವ್ರತಾಚರಣೆ, ಸಾಲಿಗ್ರಾಮ ಪೂಜೆ, ತುಲಸೀಮಾಲಾಧಾರಣ ಮುಂತಾದುವುಗಳ ಮಾಹಾತ್ಮ್ಯವೂ ವರ್ಣಿತವಾಗಿವೆ.

ಯಜ್ಞಯಾಗಾದಿಗಳಿಗಿಂತ ಶುದ್ಧ ಭಕ್ತಿಯೇ ಮೇಲಾದುದೆಂದು ನಿರೂಪಿಸುವುದೇ ಈ ಗ್ರಂಥದ ಮುಖ್ಯೋದ್ದೇಶ. ಆದುದರಿಂದಲೇ ಧರ್ಮರಾಯನ ಯಾಗದ ವಿಷಯವನ್ನು ಕೇಳಿದಾಗ ಅಗ್ನಿಯು 'ಹರಿಸಮೀಪದೊಳಿರ್ದುಂ ಈ ವಾಜಿಮೇಧಮೇಕೆ? ಅಮೃತಮಿರ್ದ್ದೆಲಳಿಗೆಳಸಿದಂತಾಯ್ತು' ಎಂದೂ ಸೌಭರಿ ಋಷಿಯು 'ಶ್ರೀಕೃಷ್ಣನಿರೆ ವಂಶಮಂ ಕೊಂದ ಪಾತಕಂ ಬಹುದೆ? ನಿಸ್ಗೆ ಕು ಸದಾ ಕೃಪಾನಿಧಿಯ ಸಾನ್ನಿಧ್ಯಮಿರುತಿರಲಾಗಿ ವಾಜಿಮೇಧಮೆ![2] ಸುರಭೂಜಮಿರೆ [3]ಶಾಲ್ಮಲಿಯನರಸುವಂತೆ ಪ್ರಾಕೃತರ ತೆರದಿಂದೆ ಹರಿ ಮನೆಯೊಳಿರೆ ಗರ್ದಭಾಕೃತಿಯ ಹರಿಯೊಡನೆ ಬಂದೆ; ಕೊಟ್ಟಿಗೆಯ ಕಾಮಧೇನುವನೊಲ್ಲದೆ ಕಟ್ಟರಣ್ಯದ ಪುಲಿಯನರಸಿ ಕರೆಯಲ್ಕೊದೆಯ ಕಟ್ಟುವೆಯಲಾ! ನಿನಗರಿವು ಹುಟ್ಟಿತಿಲ್ಲವೆ? ಧರ್ಮಸೂನು ಮತಿಗೆಟ್ಟಿಹನೆ?, ಎಂದೂ ಹೇಳುವರು. ಇವರಂತೆಯೇ ಕಥಾಶರೀರದಲ್ಲಿ ಬರುವ ಆದಿಶೇಷ ಮಯೂರಧ್ವಜ ಮೊದಲಾದವರು ಸಾಕ್ಷಾತ್ ಕೃಷ್ಣ ಸಾನ್ನಿಧ್ಯವಿರುವಾಗ ಅಶ್ವಮೇಧವು ಅಪ್ರಯೋಜಕವೆಂದೇ ಅಭಿಪ್ರಾಯಪಡುತ್ತಾರೆ. ಈ ಎಲ್ಲ ವಿಷಯಗಳನ್ನೂ ಪರ್ಯಾಲೋಚಿಸಿದರೆ ಇದಕ್ಕೆ ಭಾರತವೆಂಬ ಹೆಸರಿದ್ದರೂ ಇದು ವಾಸ್ತವವಾಗಿ "ಕೃಷ್ಣಚರಿತ"ವೆಂಬುದು ಗೋಚರವಾಗದಿರದು.

---

[1] ಮಜ್ಜಿಗೆ. [2] ಕಲ್ಪವೃಕ್ಷ. [3] ಬೂರಗದ ಮರ.

# ಕನ್ನಡ ಜೈಮಿನಿಭಾರತ

ಸಂಸ್ಕೃತದಲ್ಲಿ ಅರುವತ್ತೆಂಟು ಅಧ್ಯಾಯದಲ್ಲಿ ವಿಸ್ತಾರವಾಗಿ ವರ್ಣಿಸಿರುವ ಜೈಮಿನಿಭಾರತದ ಕಥೆಯನ್ನು ಲಕ್ಷ್ಮೀಶನು ಕನ್ನಡದಲ್ಲಿ ಅದರ ಅರ್ಧರಷ್ಟರಲ್ಲಿ ಸಂಗ್ರಹಿಸಿದ್ದಾನೆ. ಅವನು ಶ್ರೇಷ್ಠ ವರ್ಗದ ಸಂಗ್ರಹಕಾರ. ಕಥಾಸರಣಿಯಲ್ಲಾಗಲಿ ಪಾತ್ರಸೃಷ್ಟಿಯಲ್ಲಾಗಲಿ ಆತನು ಹೆಚ್ಚು ವ್ಯತ್ಯಾಸವನ್ನು ಮಾಡಿಕೊಂಡಿಲ್ಲ. ಹೊಸದಾಗಿ ಯಾವ ಸನ್ನಿವೇಶವನ್ನಾಗಲಿ ಪಾತ್ರಗಳನ್ನಾಗಲಿ ಸೃಷ್ಟಿಸಿಕೊಳ್ಳದೆ ಮೂಲವನ್ನು ಬಹುಮಟ್ಟಿಗೆ ಅನುಸರಿಸಿದ್ದಾನೆ. ರಸನಿರೂಪಣೆಯಲ್ಲಿಯೂ ವಿಶೇಷತಃ ಮೂಲಕ್ಕೆ ಋಣಿಯಾಗಿದ್ದಾನೆ. ಕಥಾಶರೀರದ ಬೇರೆ ಬೇರೆ ಭಾಗದ ಪರಿಮಾಣವೂ ಮೂಲಗ್ರಂಥದಲ್ಲಿರುವಂತೆಯೇ ಇದೆ. ಆದರೂ ಈಚೆಗೆ ಕವಿಯ ವೈಭವವನ್ನು ಕೊಂಡಾಡಬೇಕೆಂಬ ಉತ್ಸಾಹದಿಂದಲೂ ಮೂಲದ ಪರಿಚಯ ವಿಶೇಷವಿಲ್ಲದಿರುವುದರಿಂದಲೂ ಅವನಿಗೆ ಸಲ್ಲಬೇಕಾಗಿರುವುದಕ್ಕಿಂತ ಹೆಚ್ಚಿನ ಗೌರವವೂ ಮರ್ಯಾದೆಯೂ ಹೊಗಳಿಕೆಯೂ ಆತನಿಗೆ ಸಂದಿವೆ. ಹೀಗೆ ಮಾಡುವುದರಿಂದ ಮೂಲಗ್ರಂಥಕ್ಕೆ ಅನ್ಯಾಯಮಾಡಿದಂತಾಗುತ್ತದೆ. ಲಕ್ಷ್ಮೀಶನಿಗೆ ಈಗ ದೊರೆತಿರುವ ಬಹುಭಾಗದ ಗೌರವಕ್ಕೆ ಮೂಲಗ್ರಂಥವೇ ಕಾರಣ. ಕನ್ನಡ ಜೈಮಿನಿಭಾರತದಲ್ಲಿ ತೋರಿಬರುವ ಕಥಾಸಂವಿಧಾನ ಕೌಶಲ, ಸಂಭಾಷಣೆಗಳ ಸ್ವಾರಸ್ಯ, ಹಾಸ್ಯರಸಪ್ರತಿಪಾದನೆ ಇವೆಲ್ಲವೂ ಮೂಲಗ್ರಂಥದಲ್ಲಿಯೇ ಸ್ಪಷ್ಟವಾಗಿವೆ. ಕನ್ನಡಗ್ರಂಥದ ಬಹುಭಾಗವು ಸಂಸ್ಕೃತಗ್ರಂಥದ ಅನುವಾದ ಮಾತ್ರವಾಗಿದೆ.

ಆದರೂ ಲಕ್ಷ್ಮೀಶನಿಗೆ ಸಾಹಿತ್ಯಪ್ರಪಂಚದಲ್ಲಿ ಸ್ಥಾನವಿಲ್ಲದೇ ಇಲ್ಲ. ಹಿಂದೆಯೇ ತಿಳಿಸಿರುವಂತೆ ಅವನು ಉತ್ತಮ ಸಂಗ್ರಾಹಕ; ಸರಸವಾಗಿ ಅನುವಾದಮಾಡುವ ಶಕ್ತಿಯುಳ್ಳವನು. ರಸಿಕ ಮತ್ತು ವಿವೇಕಿ. ಅವನು ಉಪಯೋಗಿಸಿಕೊಂಡಿರುವ ಮೂಲ

ಗ್ರಂಥವು ಪ್ರಥಮತಃ ಪುರಾಣ; ಕಥಾನಿರೂಪಣೆಯೇ ಅದರ ಮುಖ್ಯಗುರಿ. ನೀತಿಪ್ರತಿಪಾದನೆ, ಧರ್ಮೋಪದೇಶ, ಪುಣ್ಯಕ್ಷೇತ್ರಗಳ ಮಹಿಮಾವರ್ಣನೆ, ಪಾಪಪುಣ್ಯಗಳ ಸ್ವರೂಪಕಥನ—ಇವುಗಳು ಅದರ ಇತರ ಧ್ಯೇಯಗಳು. ಆದುದರಿಂದ ಅಲ್ಲಿ ಅವುಗಳ ದೀರ್ಘವಾದ ವರ್ಣನೆಗಳಿವೆ. ಇವು ಅನೇಕ ಸಂದರ್ಭಗಳಲ್ಲಿ ನೀರಸವಾಗಿವೆ. ಕಥಾನಿರೂಪಣೆಯಲ್ಲಾಗಲಿ ಶೈಲಿಯಲ್ಲಾಗಲಿ ವೈವಿಧ್ಯವಿಲ್ಲ. ಪಾತ್ರಸೃಷ್ಟಿಯಲ್ಲಿ ಪೂರ್ವಾಪರವಿರೋಧಗಳಿವೆ. ಕಾವ್ಯದೃಷ್ಟಿಯಿಂದ ಅನುಚಿತವಾದ ಭಾಗಗಳೂ ಸೇರಿಕೊಂಡಿವೆ. ಲಕ್ಷ್ಮೀಶನು ತನ್ನ ಕವಿತಾಶಕ್ತಿಯಿಂದಲೂ ವರ್ಣನಾಚಾತುರ್ಯದಿಂದಲೂ ಕಾವ್ಯಶೈಲಿಯಿಂದಲೂ ಮೂಲದಲ್ಲಿರುವ ವಿಷಯವನ್ನು ಹಿಗ್ಗಿಸಿ ಕುಗ್ಗಿಸಿ ಕನ್ನಡದಲ್ಲಿ ಒಂದು ಮಹಾಕಾವ್ಯವನ್ನು ರಚಿಸಿದ್ದಾನೆ.*

---

* ಕಾವ್ಯದೃಷ್ಟಿಯಿಂದ ಅನಾವಶ್ಯಕವೆಂದು ತೋರಿಬಂದ ಕಾಶೀ ಮಹಿಮಾವರ್ಣನೆ, ರೋಗಗಳ ಉತ್ಪತ್ತಿಗೆ ಕಾರಣ ಮತ್ತು ಅವುಗಳ ನಿವಾರಣೋಪಾಯ, ಯುದ್ಧಕ್ಕೆ ಹೊರಡುವ ಕಾಲದಲ್ಲಿ ಸೈನಿಕರು ತಮ್ಮ ಪತ್ನಿಯರೊಡನೆ ಮಾಡಿದ ಸಂಭಾಷಣೆ, ಸಂಸಾರದ ಅನಿತ್ಯತೆಯ ವರ್ಣನೆ ಮೊದಲಾದುವುಗಳನ್ನು ಪೂರ್ಣವಾಗಿ ಬಿಟ್ಟಿದ್ದಾನೆ. ಬಹು ದೀರ್ಘವಾದ ಅಶ್ವಲಕ್ಷಣ, ವ್ಯಾಸೋಪದೇಶ, ವಾಲ್ಮೀಕಿಋಷಿಯ ಆಶ್ರಮವರ್ಣನೆ, ಸೀತಾದೇವಿಯ ಸೀಮಂತ ಮತ್ತು ಲವಕುಶರ ಉಪನಯನ ಮಹೋತ್ಸವದ ವರ್ಣನೆಗಳು ಮೊದಲಾದವನ್ನು ಸಂಗ್ರಹಿಸಿದ್ದಾನೆ. ಅನುಚಿತವಾಗಿ ಕಂಡುಬಂದ ವೃಷಕೇತುವಿನ ಪಶ್ಚಾತ್ತಾಪ, ಪ್ರದ್ಯುಮ್ನ ಸತ್ಯಭಾಮೆಯರ ಮೂದಲಿಕೆ ಮೊದಲಾದುವುಗಳನ್ನು ತೇಲಿಸಿದ್ದಾನೆ. ಆವಶ್ಯಕವಾಗಿ ಕಂಡುಬಂದ ಮರುತ್ತನ ಯಜ್ಞದ ವಿಷಯವನ್ನು ವ್ಯಾಸಭಾರತದಿಂದ ಶೇಖರಿಸಿದ್ದಾನೆ. ಕಾವ್ಯಮಯವನ್ನಾಗಿ ಮಾಡುವುದಕ್ಕಾಗಿ ನಗರ (ಭದ್ರಾವತಿ, ದ್ವಾರಕೆ, ಮಣಿಪುರ ಇತ್ಯಾದಿ), ಋತು, ಪುಷ್ಪಾಪಚಯ, ಸೂರ್ಯ ಚಂದ್ರರ ಉದಯಾಸ್ತಗಳು ಮೊದಲಾದುವುಗಳ ವರ್ಣನೆಗಳನ್ನು ಹೊಸದಾಗಿ ಸೇರಿಸಿ

ಈ ವಿಧವಾದ ಬದಲಾವಣೆಗಳಿಂದ ಕನ್ನಡ ಜೈಮಿನಿ ಭಾರತವು ಒಂದು ಸ್ವತಂತ್ರ ಗ್ರಂಥವೆನ್ನುವ ಹಾಗೆಯೇ ಆಗಿದೆ. ಪಂಡಿತ ಪಾಮರರಿಬ್ಬರಿಗೂ ಮೆಚ್ಚಿಗೆಯಾಗಿದೆ. ಕನ್ನಡ ನಾಡಿನಲ್ಲಿ ಅದರ ಪರಿಚಯವಿಲ್ಲದವರು ಅತಿ ವಿರಳ. ಸುಮಾರು ಈಗ ಇಪ್ಪತ್ತು ಮೂವತ್ತು ವರ್ಷಗಳ ವರೆಗೆ ಅದಕ್ಕೆ ಅಖಿಲ ಕರ್ಣಾಟಕದಲ್ಲಿ ಒಂದು ಉಚ್ಚಸ್ಥಾನವಿತ್ತು. ಪ್ರತಿಯೊಬ್ಬನೂ ಅದರ ಯಾವುದಾದರೊಂದು ಭಾಗವನ್ನು ಬಾಯಿಪಾಠಮಾಡು ತ್ತಿದ್ದನು. ಹಳ್ಳಿಯ ಮಠಗಳ ಪಠ್ಯಪುಸ್ತಕಗಳಲ್ಲಿ ಅದು ಅಗ್ರ ಸ್ಥಾನವನ್ನು ಪಡೆದಿತ್ತು. ಹಳ್ಳಿಯ ಪ್ರತಿಯೊಬ್ಬ ತಂದೆಗೂ ತನ್ನ ಮಗ ಜೈಮಿನಿಯನ್ನು ಕಲಿಯಬೇಕೆಂಬ ಒಂದು ಹಿರಿಯ ಆಶೆ. ಕಲಿತು ಓದಿದರೆ ಪರಮಸಂತೋಷ. ಪ್ರತಿ ರಾತ್ರಿಯಲ್ಲಿಯೂ ಹಳ್ಳಿಯ ಚಾವಡಿಯಲ್ಲಿ ಹಳ್ಳಿಯ ಉಪಾಧ್ಯಾಯರು ಅಥವಾ ಅಯ್ಯಗಳು ಜೈಮಿನಿಭಾರತವನ್ನು ಓದಿ ಅರ್ಥ ಹೇಳುವುದು, ಅದನ್ನು ಊರಿನವರೆಲ್ಲರೂ ಕೇಳಿ ರೋಮಾಂಚಿತರಾಗುವುದು; ಆಗಾಗ ಮುಖ್ಯವಾದ ಘಟ್ಟಗಳಲ್ಲಿ ಮತ್ತು ಗ್ರಂಥವು ಮುಗಿದ ಮೇಲೆ ಮಂಗಳವನ್ನು ಮಾಡಿಸಿ ನಲಿಯುವುದು; ತಿಂಗಳು ಅಥವಾ ಎರಡು ತಿಂಗಳಿಗೊಂದು ಸಲ ಜೈಮಿನಿಭಾರತದ ಆಧಾರದ ಮೇಲೆ ರಚಿತವಾದ ಸುಧನ್ವನ ಕಾಳಗ, ಲವಕುಶರ ಕಾಳಗ, ಚಂದ್ರಹಾಸನ ಕಥೆ ಮೊದಲಾದ ಯಕ್ಷಗಾನಗಳನ್ನು ಅಭಿನಯಿ ಸುವುದು,—ಇವು ವಾಡಿಕೆಯಾಗಿ ಹೋಗಿತ್ತು. ಇದರಿಂದ ಜೈಮಿನಿಭಾರತವು ಪ್ರತಿಯೊಬ್ಬ ಹಳ್ಳಿಯವನಿಗೂ ಚಿರಪರಿಚಿತ ವಾಗಿ ಲಕ್ಷ್ಮೀಶನು ಅವರ ಆದರ್ಶ ಕವಿಯಾಗಿರುತ್ತಿದ್ದನು.

---

ದ್ದಾನೆ. ಅಲ್ಲಲ್ಲಿಯೆ ಯಥೋಚಿತವಾದ ಸ್ತ್ರೀವರ್ಣನೆಯಿಂದ ಶೃಂಗಾರ ಪೂರ್ಣವಾಗಿಯೂ ಕೃಷ್ಣಪ್ರಾರ್ಥನೆಗಳಿಂದ ಭಕ್ತಿಭರಿತವಾಗಿಯೂ ಯುದ್ಧ ವರ್ಣನೆಯಿಂದ ವೀರ್ಯಯುಕ್ತವಾಗಿಯೂ ಆಗುವಂತೆ ಮಾಡಿದ್ದಾನೆ.

## ಲಕ್ಷ್ಮೀಶನ ಮೇಲ್ಮೆ

ಹೀಗಾಗುವುದಕ್ಕೆ ಕಾರಣವಿಲ್ಲದೆ ಇಲ್ಲ. ಲಕ್ಷ್ಮೀಶನಲ್ಲಿ ಪಂಡಿತ ಪಾಮರರೆಲ್ಲರೂ ಏಕರೀತಿಯಾಗಿ ಮನಸೋಲುವುದಕ್ಕೆ ಅನೇಕ ಗುಣಗಳಿವೆ. ಅವುಗಳಲ್ಲಿ ಅವನ ಕಥನಕೌಶಲವೇ ಮುಖ್ಯವಾದುದು. ಅವನು ಶ್ರೇಷ್ಠವರ್ಗದ ಕಥೆಗಾರ. ಜೈಮಿನಿ ಭಾರತವು ಒಂದು ಕಥಾಸರಿತ್ಸಾಗರ. ಯೌವನಾಶ್ವ, ಮರುತ್ತ ರಾಯ, ಅನುಸಾಲ್ವ, ನೀಲಧ್ವಜ, ಜ್ವಾಲಾದೇವಿ, ಚಂಡಿ, ಹಂಸಧ್ವಜ, ಸುಧನ್ವ, ಪ್ರಮೀಳೆ, ಬಭ್ರುವಾಹನ, ಲವಕುಶರು, ವೃಷಕೇತು, ತಾಮ್ರಧ್ವಜ, ಮಯೂರಧ್ವಜ, ವೀರವರ್ಮ, ಚಂದ್ರಹಾಸ, ಬಕದಾಲ್ಭ್ಯ—ಈ ಮುಂತಾದವರ ಕಥೆ ಉಪಕಥೆ ಗಳ ಗಣಿ ಅದು. ಕಥೆ ಹೇಳುವುದನ್ನೂ ಕೇಳುವುದನ್ನೂ ಮನುಷ್ಯನು ಬಹು ಬಾಲ್ಯದಲ್ಲಿಯೇ ಅರಿತಿದ್ದಾನೆ. ಅದರಲ್ಲಿ ಅವನಿಗೆ ಅನವರತವೂ ರುಚಿಯಿದ್ದೇ ಇರುತ್ತದೆ. ಆದುದರಿಂದಲೇ ಪಂಡಿತಪಾಮರರಿಗೂ ಸ್ತ್ರೀಪುರುಷರಿಗೂ ಆಬಾಲವೃದ್ಧರಿಗೂ ಜೈಮಿನಿಭಾರತದಲ್ಲಿ ಅಷ್ಟು ಆಸಕ್ತಿ.

ಸಂಸ್ಕೃತ ಜೈಮಿನಿಭಾರತದಲ್ಲಿ ಈ ಕಥೆಗಳಿರುವುದೇನೋ ನಿಜ. ಆದರೆ ಅಲ್ಲಿ ಅವುಗಳನ್ನು ಹೇಳುವ ರೀತಿಯಲ್ಲಿ ವೈವಿಧ್ಯವಿಲ್ಲ. ಅಲ್ಲಿಯ 'ಉವಾಚಶೈಲಿ' ಬೇಸರಿಕೆಯನ್ನುಂಟುಮಾಡುತ್ತದೆ. ಲಕ್ಷ್ಮೀಶನು ಆ ಕಥೆಗಳನ್ನೇ ಹೇಳುತ್ತಿದ್ದರೂ ಅವನ್ನು ಆರಂಭಿಸು ವುದರಲ್ಲಿ ಬೆಳೆಸುವುದರಲ್ಲಿ ವಿಸ್ತರಿಸುವುದರಲ್ಲಿ ಸಂಕೋಚಪಡಿಸುವು ದರಲ್ಲಿ—ಎಲ್ಲದರಲ್ಲಿಯೂ ತನ್ನ ಕೌಶಲವನ್ನು ತೋರ್ಪಡಿಸಿದ್ದಾನೆ. ಯಾವ ಕಥೆಯನ್ನು ಆರಂಭಿಸಬೇಕಾದರೂ ಕವಿಯು ಮೊದಲು ಕೇಳುವವನ ಮನಸ್ಸನ್ನು ತನ್ನಲ್ಲಿಗೆ ಸೆಳೆದುಕೊಂಡು ಅವನಿ ಗುತ್ಸಾಹವಾಗುವಂತೆ ಮಾಡಿ ಪೀಠಿಕೆಯಿಂದ ಬಹು ಜಾಗ್ರತೆ

ಯಾಗಿ ಪ್ರಸಕ್ತ ವಿಷಯಕ್ಕೆ ಬರುವನು. ಪ್ರತಿಯೊಂದು ಕಥೆಯ ಪ್ರಾರಂಭದಲ್ಲಿಯೂ 'ಆದೊಡೆ ನರೇಂದ್ರ ಕೇಳಾದಿಯುಗ ದಂದು ವಿಮಲಾದಿತ್ಯವಂಶದೊಳ್ ಮೆರೆದರಿಕ್ಷ್ವಾಕು ಮೊದ ಲಾದವರ್' 'ಆಲಿಸಿನ್ನಾದೊಡೆಲೆಭೂಪ ನೀಲಧ್ವಜಂ ಜ್ವಾಲೆ ಯೆಂಬರಸಿಯೊಳ್ ಸ್ವಾಹಾಭಿಧಾನದಿಂ ತನುಜೆಯಂ ಪಡೆದಂ' 'ಇನ್ನೊರೆವೆನಾಲಿಸಾದೊಡೆ ಪಾರ್ಥ ಧಾರ್ಮಿಕಂ ಮುನ್ನೊರ್ವ ನುಂಟು ಕೇರಳ ದೇಶದವನಿಪಂ ಸನ್ನುತಗುಣೋದಯಂ ಮೇಧಾವಿಯೆಂಬವಂ' ಎಂಬ ಸಂಪ್ರದಾಯಬದ್ಧವಾದ ಕಥಾ ಪ್ರಾರಂಭವೇ ಕಂಡುಬರುತ್ತದೆ. ಲಕ್ಷ್ಮೀಶನು ಕಥೆ ಹೇಳು ತ್ತಿದ್ದರೆ ಕೇಳುವವರು ಹೂಗುಟ್ಟುತ್ತಿರುವಂತೆ ಕಾಣುತ್ತದೆ. ಅಲ್ಲದೆ ಕಥೆ ಹೇಳುವ ರೀತಿಯು ಬಿಟ್ಟುಹೋದ ಭಾಗವನ್ನೂ ಮುಂದೆ ಕೇಳಬೇಕಾದ ಭಾಗವನ್ನೂ ಕೇಳುವವನೇ ಕುತೂಹಲ ದಿಂದ ಪ್ರಶ್ನೆ ಉಪಪ್ರಶ್ನೆಗಳ ಮೂಲಕ ತಿಳಿದುಕೊಳ್ಳುವಂತೆ ಮಾಡುತ್ತದೆ. ಅನಾವಶ್ಯಕವೆಂದು ತೋರಿಬಂದಾಗ ದೊಡ್ಡ ವಿಷಯವು ಅಲ್ಪಾವಕಾಶದಲ್ಲಿ ಮುಗಿದುಹೋಗುತ್ತದೆ. ಹೇಳ ಬೇಕೆಂದು ಮನಸ್ಸುಮಾಡಿದಾಗ ಸಾಮಾನ್ಯ ವಿಷಯವು ನೂರಾರು ಪದ್ಯಗಳಷ್ಟು ಬೆಳೆಯುತ್ತದೆ. ಲವಕುಶರ ಕಥೆಯನ್ನು ಹೇಳುವಾಗ ಕಥೆಯು 'ವ್ಯಾಪಿಸಿದ ಸಂಪದಕೆ ನೆಲೆವನೆಯೆನಿಪ್ಪ ಯೋಧ್ಯಾಪುರದೊಳವತರಿಸಿದಂ ಮಹಾವಿಷ್ಣು ಸುತರೂಪದಿಂ ರಾಮಾಭಿಧಾನದೊಳ್ ಪುತ್ರಕಾಮೇಷ್ಟಿಯಿಂ ದಶರಥಂಗೆ' ಎಂದು ಆರಂಭವಾಗಿ ಹತ್ತು ಪದ್ಯಗಳಲ್ಲಿ ಆರು ಕಾಂಡಗಳ ಕಥೆಯು ಮುಗಿದು (ಈ ಭಾಗ ಮೂಲದಲ್ಲಿಲ್ಲ), ಸೀತಾವನ ವಾಸವು ವಿಸ್ತೃತವಾಗಿ ಲವಕುಶರ ಕಾಳಗವು ನೂರಿಪ್ಪತ್ತು ಪದ್ಯಗಳಾಗಿ ಬೆಳೆಯುವುವು. ಕಥಾವಿವರಗಳನ್ನು ತುಂಬುವುದ ರಲ್ಲಿಯೂ ಹಾಗೆಯೆ. ಕವಿಯು ಬಹು ಎಚ್ಚರಿಕೆಯಿಂದ ಪ್ರತಿ

ಯೊಂದು ಪಾತ್ರವೂ ಸನ್ನಿವೇಶವೂ ಪುಷ್ಟಿಯಾಗುವಂತೆ ಆವಶ್ಯಕವಿದ್ದಷ್ಟನ್ನು ಮಾತ್ರ ವರ್ಣಿಸುತ್ತಾನೆ. ಸೀತಾವನ ವಾಸ, ಚಂದ್ರಹಾಸನ ಕಥೆ ಇವು ಇದಕ್ಕೆ ಉತ್ತಮ ನಿದರ್ಶನ ಗಳು.

ಹಿಂದೆಯೇ ತಿಳಿಸಿರುವಂತೆ ಇದು ಭಾಗವತ ಪುರಾಣ ವಾದುದರಿಂದಲೂ ಭಕ್ತಿರಸಪ್ರಧಾನವಾದ ಗ್ರಂಥವಾದುದ ರಿಂದಲೂ ಜನರಿಗೆ ಇದರಲ್ಲಿ ಮತ್ತಷ್ಟು ಆದರ ಹೆಚ್ಚಾಗಲು ಕಾರಣವಾಗಿದೆ. ಪಾಂಡವ ಪ್ರತಿಷ್ಠಾಪನಾಚಾರ್ಯನಾದ ಕೃಷ್ಣನೇ ಇದರ ಕಥಾನಾಯಕ. ಅವನೇ ಕಾವ್ಯದೊಡಲು; ಕವಿಯ ಉಸಿರು. ಅವನನ್ನು ಗ್ರಂಥದಲ್ಲಿ ಬರುವ ಎಲ್ಲ ವ್ಯಕ್ತಿ ಗಳೂ ಒಂದಲ್ಲ ಒಂದು ರೀತಿಯಲ್ಲಿ ಸ್ತೋತ್ರಮಾಡುತ್ತಾರೆ. ಧರ್ಮರಾಯನಿಗೆ ಅವನಿಲ್ಲದೆ ಯಜ್ಞಮಾಡಲು ಸಾಧ್ಯವಿಲ್ಲವೆಂಬ ದೃಢನಂಬಿಕೆ. ಅರ್ಜುನನಿಗಂತೂ ಅವನೇ ಪ್ರಾಣ. ಇತರ ಭಕ್ತರ ವಿಷಯ ಹಿಂದೆಯೇ ತಿಳಿಸಿದೆ. ಅವರೊಬ್ಬೊಬ್ಬರೂ ಪ್ರತ್ಯೇಕ ವಾಗಿ ಸ್ತೋತ್ರಮಾಡಿರುವ ಪದ್ಯಗಳು ಸ್ವತಂತ್ರವಾದ ಸ್ತೋತ್ರ ಮಾಲಿಕೆಗಳಂತಿವೆ. ಮೂಲಗ್ರಂಥದಲ್ಲಿ ಈ ಭಾಗಗಳು ರೇಖಾ ರೂಪದಲ್ಲಿವೆ. ಲಕ್ಷ್ಮೀಶನು ಅವನ್ನು ಪುಷ್ಟೀಕರಿಸಿ ಆಕರ್ಷಕ ವಾಗಿ ಮಾಡಿದ್ದಾನೆ.

ಲಕ್ಷ್ಮೀಶನ ಇಂತಹ ಭಕ್ತಿರಸನಿರೂಪಣೆಯಲ್ಲಿಯೂ ಒಂದು ಸ್ವಾರಸ್ಯವಿದೆ. ಅವನು ವಿಷ್ಣುಭಕ್ತಿಯನ್ನು ಪ್ರತಿಪಾದಿಸು ತ್ತಿದ್ದರೂ ಇತರ ದೈವಗಳಲ್ಲಿ ಆದರವನ್ನೂ ಇತರ ಮತಗಳಲ್ಲಿ ಸಹಾನುಭೂತಿಯನ್ನೂ ತೋರಿಸಿದ್ದಾನೆ. ಹರಿಹರ ವಿಭೇದ ವನ್ನು ಮಾಡುವುದು ಪಾಪಕರವೆಂದು ಗ್ರಂಥದ ಅನೇಕ ಕಡೆ ಶ್ರುತಪಡಿಸಿದೆ. ಹರಿಹರಾರ್ಚನೆ, ನವಗ್ರಹಪೂಜೆ, ಸೂರ್ಯ ನಮಸ್ಕಾರ, ಗಣೇಶಾರಾಧನೆ ಮೊದಲಾದುವು ಎಲ್ಲ ಭಕ್ತರಿಗೂ

ಶ್ರೇಯಸ್ಕರವೆಂದು ಹೇಳಿದೆ. ಆದುದರಿಂದಲೇ ಕೃಷ್ಣನ ಸಾಕ್ಷಾಚ್ಛಿಷ್ಯನಾದ ಅರ್ಜುನನು ಶಿವನಲ್ಲಿಯೂ ಪೂರ್ಣಭಕ್ತಿಯನ್ನಿಟ್ಟಿದ್ದನೆಂದೂ ಪರಮ ವೈಷ್ಣವನಾದ ಸುಧನ್ವನ ಶಿರಸ್ಸನ್ನು ಈಶ್ವರನು ತನ್ನ ರುಂಡಮಾಲೆಯಲ್ಲಿ ಧರಿಸಿದನೆಂದೂ ವಿಷ್ಣುಭಕ್ತರಾದ ಚಂದ್ರಹಾಸ, ಮದನ ಮೊದಲಾದವರು ಶಿವನಲ್ಲಿಯೂ ಕಾಳಿಯಲ್ಲಿಯೂ ಸಮಾನ ಭಕ್ತಿಯುಳ್ಳವರಾಗಿದ್ದರೆಂದೂ ಗ್ರಂಥದಲ್ಲಿ ವರ್ಣಿತವಾಗಿರುವುದು. ಈ ಸರ್ವಮತಸಹಾನುಭೂತಿ ಸಂಸ್ಕೃತ ಜೈಮಿನಿಭಾರತದ ವೈಶಿಷ್ಟ್ಯ. ಅದನ್ನು ವ್ಯತ್ಯಾಸಪಡಿಸಿ ಏಕಪಕ್ಷೀಯವಾಗಿ ಮಾಡದಿರುವುದು ಲಕ್ಷ್ಮೀಶನ ಮೇಲ್ಮೆ.

ಜೈಮಿನಿಭಾರತವು ಉತ್ತಮ ನೀತಿಗ್ರಂಥ. ಶುದ್ಧಕಾವ್ಯದೃಷ್ಟಿಯಿಂದ ನೀತಿಪ್ರಧಾನವಾದ ಗ್ರಂಥವು ಶ್ರೇಷ್ಠಪಂಕ್ತಿಗೆ ಏರದಿರಬಹುದು. ಆದರೂ ಕನ್ನಡ ಸಂಸ್ಕೃತ ಲಾಕ್ಷಣಿಕರು ಅದಕ್ಕೆ ಉಚ್ಚಸ್ಥಾನವನ್ನು ಕೊಟ್ಟಿದ್ದಾರೆ. ಕನ್ನಡ ಲಾಕ್ಷಣಿಕರಲ್ಲಿ (ಇದುವರೆಗೆ ತಿಳಿದಿರುವವರಲ್ಲಿ) ಪರಮಪ್ರಾಚೀನನಾದ ನೃಪತುಂಗನು ಕಾವ್ಯದ ಫಲವನ್ನು

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ ||
ಖೋಪಾತ್ತಮಿದೆಂದಱಿಪುಗು
ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ ||

ಎಂಬುದಾಗಿ ತಿಳಿಸಿದ್ದಾನೆ. ಇದರಿಂದ ಕಾವ್ಯಪಠನದ ಉದ್ದೇಶದಲ್ಲಿ ಧರ್ಮಜ್ಞಾನಾಭಿವೃದ್ಧಿಯೂ ಒಂದು ಫಲವೆಂಬುದು ಪ್ರಾಚೀನರಿಂದ ಅಂಗೀಕೃತವಾದ ವಿಷಯವೆಂದು ಒಪ್ಪಿಕೊಳ್ಳಬಹುದಾಗಿದೆ. ಲಕ್ಷ್ಮೀಶನು ಈ ಅಭಿಪ್ರಾಯವನ್ನನುಸರಿಸಿಯೇ

ಮೂಲದಲ್ಲಿ ಬಹು ವಿಸ್ತಾರವಾಗಿ ಪ್ರತಿಪಾದಿತವಾಗಿರುವ 'ಧರ್ಮಸಾರಾಯ'ವನ್ನು ಬಹುಮಟ್ಟಿಗೆ ಸಂಗ್ರಹಿಸಿ ಯಥೋಚಿತವಾಗಿ ತನ್ನ ಗ್ರಂಥದಲ್ಲಿ ವಿವರಿಸಿದ್ದಾನೆ. ಕಾವ್ಯದಲ್ಲಿ ಬರುವ ಧರ್ಮಿಷ್ಠರೂ, ಸತ್ಯಸಂಧರೂ, ಸದಾಚಾರಶೀಲರೂ ಆದ ವಿಷ್ಣುಭಕ್ತರು ವಾಚಕರಿಗೆ ಆದರ್ಶಪ್ರಾಯರಾಗಬೇಕೆಂಬುದು ಕವಿಯ ಅಭಿಪ್ರಾಯ. ಆದುದರಿಂದಲೇ ಅವರ ನಡತೆಯನ್ನೂ ಧರ್ಮಸಾಮ್ರಾಜ್ಯವನ್ನೂ ಬಾಯಿತುಂಬ ವರ್ಣಿಸಿದ್ದಾನೆ. ಓದುಗರಿಗೆ ಸತ್ಸ್ವಭಾವದ ಅರಿವು ವರ್ಣಾಶ್ರಮಗಳ ಜ್ಞಾನ, ಪುಣ್ಯಪಾಪಗಳ ತಿಳಿವು, ಧರ್ಮಾಧರ್ಮಗಳ ವಿವೇಚನೆ—ಇವುಗಳು ಸಾಕಾದಷ್ಟು ಉಂಟಾಗುವುದಕ್ಕಾಗಿ ಅವುಗಳನ್ನು ಬಹು ಚಾತುರ್ಯದಿಂದ ಸಂಗ್ರಹಿಸಿದ್ದಾನೆ.

ಲಕ್ಷ್ಮೀಶನು ರಸಪಕ್ಷಪಾತಿ. ಆದುದರಿಂದಲೇ ಅವನ ಗ್ರಂಥದಲ್ಲಿ ನಾವು ಅನೇಕ ರಸದ ಮಡುಗಳನ್ನು ನೋಡುತ್ತೇವೆ. ಗ್ರಂಥದ ಮೊದಲಿಸಿಂದ ಕೊನೆಯ ವರೆಗೆ ನವರಸಗಳಿಗೂ ಉಚಿತ ಸ್ಥಾನವಿದ್ದರೂ ಮುಖ್ಯರಸಗಳಾದ ಶೃಂಗಾರ ವೀರರಸಗಳಿಗೆ ಇಲ್ಲಿ ಪ್ರಾಧಾನ್ಯ. ವಾಸ್ತವವಾಗಿ ಈ ಎರಡು ರಸಗಳೇ ಪ್ರತಿಯೊಬ್ಬ ಮನುಷ್ಯನ ಜೀವನಾಡಿಗಳನ್ನಾಡಿಸಿ ರಕ್ತವನ್ನು ಕುದಿಸಿ ಮೈಜೊಮ್ಮೇರಿಸುತ್ತವೆ. ಎಂತಹವನನ್ನಾದರೂ ಹುಚ್ಚನನ್ನಾಗಿಸುತ್ತವೆ. ಇವಕ್ಕೆ ಮಣಿಯದವನಿಲ್ಲ. ಇವುಗಳಿಂದ ತಣಿಯದವನಿಲ್ಲ. ಈ ಗುಟ್ಟನ್ನು ತಿಳಿದುದರಿಂದಲೇ ಲಕ್ಷ್ಮೀಶನು ಮೂಲದಲ್ಲಿ ಬಹು ಸಂಗ್ರಹವಾಗಿ ಪ್ರತಿಪಾದಿತವಾಗಿರುವ ಈ ರಸಗಳನ್ನು ತನ್ನ ಗ್ರಂಥದಲ್ಲಿ ವಿಸ್ತರಿಸಿ ಅವಕ್ಕಾಗಿ ಹೆಚ್ಚಿನ ಭಾಗವನ್ನು ಮೀಸಲಾಗಿಟ್ಟಿದ್ದಾನೆ. ಇವುಗಳಲ್ಲಿಯೂ ವೀರರಸಕ್ಕೆ ಅಗ್ರತಾಂಬೂಲ; ಗ್ರಂಥದ ಅರ್ಧಭಾಗಕ್ಕಿಂತ ಹೆಚ್ಚು ಭಾಗವು ವೀರರಸಪ್ರತಿಪಾದಕಗಳಾದ ಯುದ್ಧಗಳ ವರ್ಣನೆಗೆ—ಸುಧನ್ವನ ಕಾಳಗ, ಬಭ್ರುವಾಹ

ನನ ಕಾಳಗ ಲವಕುಶರ ಕಾಳಗ ಮೊದಲಾದುವುಗಳಿಗೆ—ಮುಡಿಪಾಗಿದೆ. ಆದುದರಿಂದಲೇ ಸ್ವತಃ ವೀರರೂ ಯುದ್ಧಪ್ರಿಯರೂ ಸಾಹಸಿಗಳೂ ಆದ ನಮ್ಮ ಹಿರಿಯರು ಈ ಗ್ರಂಥವನ್ನು—ಇದರಲ್ಲಿ ಬರುವ ಯುದ್ಧವರ್ಣನೆಗಳನ್ನು—ಓದಿ, ಕೇಳಿ ಭುಜಾಸ್ಫಾಲನ ಮಾಡಿಕೊಂಡು ಬಾಯಿಚಪ್ಪರಿಸಿ ಜಾಗುಜಾಗೆಂದು ಪ್ರಶಂಸಿಸಿ ಸಂತೋಷಪಟ್ಟಿರಬೇಕು. ಲಕ್ಷ್ಮೀಶನ ಗ್ರಂಥವನ್ನು ಓದುತ್ತಿದ್ದರೆ ವೀರಾಧಿವೀರರ ಆರ್ಭಟ, ರಥದ ಚೀತ್ಕಾರ, ಆಯುಧಗಳ ಸಂಘಟ್ಟಣೆ, ಗಜಹಯಗಳ[1]ಬೃಂಹಿತ[2]ಹೇಷಿತಗಳು, ಸಾಯುವವರ ನೋವುಗಳು, ಬಾಳುವವರ ಜಯಕಾರಗಳು, ಪ್ರತಿಪಕ್ಷದವರ ಮೂದಲೆ—ಪ್ರತಿಯೊಂದೂ ವಾಚಕರ ಮನಸ್ಸನ್ನು ಪ್ರವೇಶಿಸಿ ಅವರಲ್ಲಿ ವಿಶೇಷ ಪರಿಣಾಮವನ್ನುಂಟುಮಾಡತಕ್ಕವಾಗಿವೆ. ಧರ್ಮರಾಯನ ಯಜ್ಞಾಶ್ವವು ಕೃಷ್ಣಾರ್ಜುನರ ಮೈಗಾಪಿನಿಂದ ಸಂಚಾರಕ್ಕೆ ಹೊರಡಲು ಸಿದ್ಧವಾಗಿದೆ. ದ್ರೌಪದಿಯೇ ಮೊದಲಾದ ರಾಣಿವಾಸದವರು ಆ ಕುದುರೆಯನ್ನು ಯಥಾವಿಧಿಯಾಗಿ ಪೂಜಿಸುವರು. ಆ ಸಮಯಕ್ಕೆ ಸರಿಯಾಗಿ ವಾಸುದೇವನ ಪೂರ್ವವೈರಿಯಾದ ಅನುಸಾಲ್ವನೆಂಬ ರಾಕ್ಷಸನು ಕೃಷ್ಣನ ಮೇಲೆ ತನಗಿದ್ದ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಆ ಕುದುರೆಯನ್ನಪಹರಿಸಿಕೊಂಡು ಹೋಗಿ ಅದರ ಸುತ್ತಲೂ ಹದ್ದಿನಾಕಾರದಲ್ಲಿ ತನ್ನ ಸೇನೆಯನ್ನು ನಿಲ್ಲಿಸಿ ತಾನದರ ಮುಖದಲ್ಲಿ ಶಸ್ತ್ರಸನ್ನದ್ಧನಾಗಿ ನಿಂತು ತನ್ನಾಪ್ತನಾದ ಸುಧಾರನನ್ನು ಕುರಿತು

ಅಣ್ಣನಂ ಕೊಂದೆಮ್ಮ ಸೌಭನಗರವನಿರಿದ
ಬೆಣ್ಣೆಗಳ್ಳನ ಕೊಬ್ಬಿದುದರದೊಳ್ ಪೊಚ್ಚಪೊಸ
ಸುಣ್ಣಮಂ ಪೊಯ್ದು ನೀರೆರೆದಂತೆ ಮಾಡಿ ಯಾದವ ಪಾಂಡವರ ಬಿಂಕದ

---

[1] ಆನೆಯ ಧ್ವನಿ. [2] ಕುದುರೆಯ ಧ್ವನಿ.

ಬಣ್ಣಮಂ ಕಿಡಿಸಿ ಕಾಳಗದೊಳುಬ್ಬಸಮನುರೆ
[1]ಹಣ್ಣಿದಲ್ಲದೆ ಮಾಣೆನಹಿತರ್ಗೆ ಎನ್ನ ಪಗೆಯೆನ್ನ
ಕಣ್ಣ ಮುಂದಕ್ಕೆ ಸುಳಿದು ಜೀವಿಪನೆ? ಸೇನೆ ಸನ್ನದ್ಧಮಾಗಿರಲಿ . . . ||

ಎಂದು ಆಜ್ಞೆಮಾಡಿ ಸೇನಾಸಮೇತನಾಗಿ ಕೃಷ್ಣನನ್ನೆ ದಿರಿಸುವನು. ಪ್ರತಿಪಕ್ಷದಲ್ಲಿ ಪ್ರದ್ಯುಮ್ನನು ದೈತ್ಯನೊಡನೆ ಕಾದಲು ಅಪ್ಪಣೆಯನ್ನು ಪಡೆದು ಬರುತ್ತಿರಲು ಅನುಸಾಲ್ವನು ಅವನನ್ನು ತಡೆಯುವನು. ಪುಂಡರೀಕಾಕ್ಷನ ಕುಮಾರನು ಅವನ ಮೇಲೆ ಪಂಚಬಾಣವನ್ನು ಪ್ರಯೋಗಮಾಡುವನು. ಇದನ್ನು ನೋಡಿ ಅನುಸಾಲ್ವನು ಕೋಪಗೊಂಡರೂ ಉದಾಸೀನದಿಂದ

[2]ವ್ಯಗ್ರವೇತಕೆ ನಿನಗೆ? ನಾವಿಂದ್ರಿಯಂಗಳಂ
ನಿಗ್ರಹಿಸಿದವರಲ್ಲ ವಿರಹವೆಮಗಿಲ್ಲ ಸುರ
ತಗ್ರಾಹ್ಯಮೋಹನದ ಪಂಚಬಾಣಪ್ರಯೋಗಂಗಳೇಕೀಗ? ನಿನ್ನ |
[3]ವಿಗ್ರಹಕೆ ನಮಗಿಕ್ಷುಚಾಪ[4] ವಾರಡಿವೆದೆ ಸ
ಮಗ್ರಕುಸುಮಾಸ್ತ್ರಂಗಳಿಲ್ಲ ನೋಡೆಮ್ಮದೊಂ
ದುಗ್ರ[5] ಸಾಯಕವನೆಂದಾರ್ದು ತೆಗೆದೆಚ್ಚು . . . ||

ಅವನನ್ನು ಪರಾಭವಿಸುವನು. ಅವನ ಸಹಾಯಕ್ಕೆ ಬಂದ ಕೃಷ್ಣನಿಗೂ ಅದೇ ಗತಿಯಾಗುವುದು. ಆಗ ವೃಷಕೇತುವು ರೇಗಿ ಮುನ್ನುಗ್ಗಿ ಅನುಸಾಲ್ವನನ್ನು ತಡೆದು 'ನೀನಿಂದು ಮುರವೈರಿಯಂ ತೆರಳಿಚಿದೊಡೇನೋ? ಎನ್ನಿಂದುಳಿದೆಯಾದೊಡಾಂ ಕರ್ಣಜನೆ? ನಿಲ್ಲೆನುತ ತೆಗೆದೆಸಲು' ಅನುಸಾಲ್ವನು

[6]ಹೆಂಗುಸಂ ಕೊಂದದಟುತನದಿಂದೆ [7]ಬಂಡಿಯಂ
ಭಂಗಿಸಿದ ಬಲ್ಪಿಂದ [8]ಲೆತ್ತು [9]ಕತ್ತೆಯನಿರಿದ
ತುಂಗ ವಿಕ್ರಮದಿಂದ [10]ಹಕ್ಕಿ [11]ಹಾವಂ ಸದೆದ ಸಾಹಸದಿ ಬೆರೆತಿರ್ದೊಡೆ |

---

[1] ಉಂಟುಮಾಡದೆ. [2] ಆಶ್ಚರ್ಯ. [3] ಯುದ್ಧ. [4] ದುಂಬಿಯಿಂದ ಕಟ್ಟಿದ ಹೆದೆ. [5] ಬಾಣ. [6] ಪೂತನಿ. [7] ಶಕಟಾಸುರ. [8] ಪ್ರಳಂಬಾಸುರ. [9] ಧೇನುಕಾಸುರ. [10] ಬಕಾಸುರ. [11] ಕಾಳಿಂಗ.

ಸಂಗರದೊಳಾಳಹನೆ ಗೋಪನ್? ಅವನಂ ಯುದ್ಧ
ರಂಗದೊಳ್ ತೊಲಗಿಪುದೆನಗೆ ಪರಾಕ್ರಮವೆ? ನಿ
[1]ನ್ನಂಗವಣೆ ಯಾವುದೆಮ್ಮೊಡನೆ ಸೆಣಸಿದೆ? . . . ||

ಎನುತ ಬಾಣಪ್ರಯೋಗಮಾಡುವನು. ಆದರೆ ವೃಷಕೇತುವು ತನ್ನ ಅಸಾಧಾರಣವಾದ ಶರಸಂಧಾನದಿಂದ ರಾಕ್ಷಸನ ನಾಲ್ಕು ತೋಳುಗಳನ್ನು ಕತ್ತರಿಸಿ ಅವನು ಕೃಷ್ಣನನ್ನೇ ಆಶ್ರಯಿಸುವಂತೆ ಮಾಡುವನು. ಈ ಸಂದರ್ಭದಲ್ಲಿ ರಾಕ್ಷಸನ ಮೂದಲೆಗಳು ಎಷ್ಟು ವ್ಯಂಗ್ಯವಾಗಿಯೂ ಶಕ್ತಿಯುಕ್ತವಾಗಿಯೂ ಇರುವು ವೆಂಬುದನ್ನು ವಾಚಕರು ಸುಲಭವಾಗಿ ಮನಗಾಣಬಹುದು.

ಅರ್ಜುನ ಬಭ್ರುವಾಹನರ ಮೂದಲೆಗಳು ಇದಕ್ಕಿಂತಲೂ ಸ್ವಾರಸ್ಯವಾಗಿಯೂ ಭಾವಗರ್ಭಿತವಾಗಿಯೂ ಇವೆ. ಬಭ್ರುವಾಹನನು ಅರ್ಜುನ ಚಿತ್ರಾಂಗದೆಯರ ಮಗ. ಆದರೂ ಯಜ್ಞಾಶ್ವವನ್ನು ಕಟ್ಟುವವರೆಗೂ ತಂದೆಮಕ್ಕಳಿಗೆ ಸಮಾಗಮವಿಲ್ಲದುದರಿಂದ ಅವರ ಪರಸ್ಪರ ಬಾಂಧವ್ಯವು ಗೊತ್ತಾಗಲು ಅವಕಾಶವಾಗಲಿಲ್ಲ. ಕುದುರೆಯು ಮಣಿಪುರಕ್ಕೆ ಬಂದೊಡನೆಯೇ ಬಭ್ರುವಾಹನನು ಕ್ಷತ್ರಿಯೋಚಿತವಾದ ತನ್ನ ಪರಾಕ್ರಮದಿಂದ ಅದನ್ನು ಕಟ್ಟಿ ಅರ್ಜುನನ ಮೇಲೆ ಯುದ್ಧಕ್ಕೆ ಹೊರಡಲು ಸನ್ನದ್ಧನಾಗುವನು. ಇದನ್ನರಿತು ಅವನ ತಾಯಿಯಾದ ಚಿತ್ರಾಂಗದೆಯು ಓಡಿ ಬಂದು ಅರ್ಜುನನೊಡನೆ ಯುದ್ಧ ಮಾಡುವುದು ಅನುಚಿತವೆಂದು ಬುದ್ಧಿಗಲಿಸಲು ಅವಳ ಅಭಿಪ್ರಾಯಾನುಸಾರವಾಗಿ ಬಭ್ರುವಾಹನನು ಯುದ್ಧಕಾರ್ಯವನ್ನು ನಿಲ್ಲಿಸಿ ಸಮಸ್ತ ಪರಿವಾರದೊಡನೆ ಅರ್ಜುನನಲ್ಲಿಗೆ ಹೋಗಿ ಭಯಭಕ್ತಿಯಿಂದ ಸಾಷ್ಟಾಂಗ ನಮಸ್ಕಾರಮಾಡಿ ಅನರ್ಘ್ಯರತ್ನಗಳನ್ನು ಕಾಣಿಕೆಯಾಗಿ ಸಮರ್ಪಿಸಿ ಕೈಮುಗಿದು

---

[1] ಅಪೇಕ್ಷೆ.

ತಾತ ಚಿತ್ತೈಸು ನಿನ್ನಾತ್ಮಜಂ ತಾನ್, ಎನ್ನ
ಮಾತೆ ಚಿತ್ರಾಂಗದೆ, ಸಲಹಿದವಳುಲೂಪಿ, ಸಂ
ಪ್ರೀತಿಯಿಂದಿವರಾದರರಸಿಯರ್, ನೀನಂದು ತೀರ್ಥಯಾತ್ರೆಗೆ ಬಂದೊಡೆ |
ಜಾತನಾದೆಂ, ಬಭ್ರುವಾಹನಂ, ತಾನೀಗ
ಳೀ ತುರಗಮಂ ಪಿಡಿದರಿಯದೆ ಕಟ್ಟಿದ ಗುಣಾ
ತೀತಮಂ ಕ್ಷಮಿಸು . . . ||

ಎಂದು ಬೇಡಿಕೊಂಡು ಕುದುರೆಯನ್ನೊಪ್ಪಿಸುವನು. ಪೂರ್ವ ಸಂಬಂಧವೂ ಬಭ್ರುವಾಹನನ ಶರಣಾಗತಿಗೆ ಕಾರಣವೂ ತಿಳಿಯದ ಅರ್ಜುನನು ಕ್ಷತ್ರಿಯರಿಗನುಚಿತವಾದ ಈ ಮಾತನ್ನು ಕೇಳಿದೊಡನೆಯೆ ರೋಷಾವಿಷ್ಟನಾಗಿ ಬಭ್ರುವಾಹನನನ್ನು ಹೇಡಿಯೆಂದು ಬಗೆದು ಅವನನ್ನು ಒದೆದು 'ಎಲವೋ ನೀ ಪಂದೆ, ಲೋಕದೊಳ್ ತನಗೆ ಸಂಭವಿಸಿದವನ್ ಈ ಪರಿಯೊಳಂಜುವನೆ? ಮೊದಲಶ್ವಮಂ ಕಟ್ಟಿ ಮತ್ತೆ ಬಿಡುವನೆ ಕಾದದೆ?

ಚಿತ್ರಾಂಗದೆಗೆ ವೈಶ್ಯನಿಂದ ಸಂಭವಿಸಿರ್ದ
ಪುತ್ರನಲ್ಲದೆ ತನಗೆ ಜನಿಸಿದೊಡೆ ಬಿಡುವೆಯಾ
ಕ್ಷತ್ರಿಯರ ಮತಮಂ? ಸುಭದ್ರೆಗೆನ್ನಿಂ ಜನಿಸಿದಭಿಮನ್ಯು ತಾನೊಬ್ಬನೆ|
ಶತ್ರುಗಳ [1]ವಿಗಡ ಚಕ್ರವ್ಯೂಹದಲ್ಲಿಗೆ ಧ
ರಿತ್ರೀಶರಂ ಮೀರಿ ನಡೆದು ಸಂಗ್ರಾಮದೊಳ
ಮಿತ್ರಭಟರಂ ಗೆಲ್ದಳಿದನ್, ಆತನಲ್ಲದಾತ್ಮಜರುಂಟೆ ತನಗೆ . . .

[2]ಜಂಬುಕಂ ಜನಿಸುವುದೆ ಸಿಂಗದುದರದೊಳ್? ಅಕಟ
[3]ಹೆಂಬೇಡಿ ನೀನೆಲವೊ ಕುಲಗೇಡಿ ತನ್ನ [4]ಬಸಿ
ರಿಂ ಬಂದವನೆ? ಋೂಳ! ಕುದುರೆಯಂ ಕಾದದೇತಕೆ ತಂದೆ ಪಂದೆ? ನಿನಗೆ|
[5]ಡೊಂಬಿನ ಚತುರ್ಬಲಮಿದೇಕೆ? ಭೂಪಾಲರಾ
ಡಂಬರದ ಛತ್ರಚಮರಂಗಳೇತಕೆ? ಬಯಲ
[6]ಡಂಬುಕದ [7]ಕೈದುಗಳಿವೇಕೆ? ಸುಡುಸುಡು ಜೀವದಾಸೆಯಂ . . . ||

---

[1] ಭಯಂಕರವಾದ. [2] ನರಿ. [3] ಹೇಡಿ. [4] ಹೊಟ್ಟೆಯಿಂದ. [5] ಮೋಸದ.
[6] ಮೋಸ. [7] ಆಯುಧ.

'ಅಹಹ ನರ್ತಕಿಯಲಾ! ಗಂಧರ್ವನಾಯಕನ ದುಹಿತೃ ವಲ್ಲಾ! ನಿನ್ನ ಮಾತೆ ಚಿತ್ರಾಂಗದೆಯೆ! ವಿಹಿತಮಲ್ಲಿದು ನಿನಗೆ ಭೂಮಿಪರ ವೇಷಮಂ ತಳೆದ ನಾಟಕದ ರಚನೆ. ಬಹಳ ಪೌರುಷ ಮಾದುದಿಂದು ಹಯಮಂ ತಡೆದ [1]ರಚಣೆ, ರಾಯರ ಮುಂದೆ ಹೋಗು' ಎಂದು ದುಷ್ಕೃತಿಯ ಕುಹಕದಿಂದ ಬೈದು ಭಂಗಿಸು ವನು. ತಾಯಿಯ ಇಷ್ಟಾರ್ಥವನ್ನು ಸಲ್ಲಿಸುವುದಕ್ಕಾಗಿ ವಿನಯ ಭಾವದಿಂದ ತಲೆಬಾಗಿದ ಬಭ್ರುವಾಹನನಿಗೆ ಇದನ್ನು ಕೇಳಿ ರಕ್ತವು ಕುದಿಯುವುದು; ಕೋಪವು ನೆತ್ತಿಗೇರುವುದು; ಕಣ್ಣು ಗಳು ಕೆರಳುವುವು. ಪ್ರಳಯಭೀಕರಮೂರ್ತಿಯಾಗಿ ಕನಲಿ '[2]ಪಳಿದೆಲಾ ಮಾತೆಯಂ! ಎನಗೆ [3]ಸೀವರಿಸಿದೆಯಲಾ! ಅರಿಯಬಹುದಿನ್ನು, ನಿನ್ನ ತಲೆಗೆಡಹದೊಡೆ ಕುರುಹಿಟ್ಟು ನೀನಾಡಿದನಿತೆಲ್ಲಮುಂ ದಿಟಂ, ಮರೆಯದಿರ್ ಸಾಕು' ಎಂದು ಪ್ರತಿಜ್ಞೆಮಾಡಿ ಅರ್ಜುನನ ಮೇಲೆ ಯುದ್ಧವನ್ನು ಪ್ರಾರಂಭಿಸಿ ಅವನ ಪಕ್ಷದ ಅನೇಕ ಅತಿರಥಮಹಾರಥರನ್ನು ಸದೆಬಡಿಯು ವನು. ಬಭ್ರುವಾಹನನ ತೀಕ್ಷ್ಣಶರಘಾತದಿಂದ ಮಹಾಪರಾ ಕ್ರಮಶಾಲಿಯಾದ ವೃಷಕೇತುವೂ ಗತಪ್ರಾಣನಾಗುವನು. ಅವನ ತಲೆಯು ಛೇದವಾಗಿ ಪಾರ್ಥನ ಕಾಲ ಬಳಿ ಹೋಗಿ ಬೀಳುವುದು. 'ಕಟ್ಟುಗ್ರಮಾಗಿರ್ದ ತನಿವೀರರಸದೊಂದು ಗಟ್ಟಿ ಯೆನೆ ತೋರ್ಪ ಕರ್ಣಜನ ತಲೆಯಂ ನರಂ [4]ನಿಟ್ಟಿಸುತೆ ಪಣೆಯಂ ಪಣೆಯೊಳಿಟ್ಟು ಪೊಸೆದು ಚುಂಬಿಸಿ ಕಂಬನಿದುಂಬಿ, ಪಗೆಯೆಂದು ಕೊಂದೆವಗ್ರಜನನ್, ಎಮಗಾತಗಂ ಮಿಗಿಲೆಂದು ಕಂಡಿಹೆವಲ್ಲೆ ನಿನ್ನನ್, ಅಯ್ವರ್ಗೆ ಸುಗತಿಗೊಡುವಾತ್ಮಭವ ರಿರ್ದಪರೆ?' ಎಂದು ಅವನ ರೂಪ ಗುಣ ಶೀಲವನ್ನು ನೆನೆದು

---

1 ನಟನೆ. 2 ನಿಂದಿಸಿದೆಯಲ್ಲವೆ. 3 ಜುಗುಪ್ಸೆ ತೋರಿಸಿದೆಯಲ್ಲವೆ.
4 ದೃಷ್ಟಿಸಿ ನೋಡುತ್ತ.

ಶೋಕಪ್ರಳಾಪದಿಂದಳಲುತ್ತಿರಲು, ಇತ್ತ ಬಭ್ರುವಾಹನನು,
ತನ್ನನ್ನು ಅರ್ಜುನನು ವೈಶ್ಯಪುತ್ರನೆಂದು ಜರೆದ ಶೂಲಪ್ರಾಯ
ವಾದ ಕಟಕಿವಾತುಗಳು ಹೃದಯವನ್ನು ಇರಿಯುತ್ತಿರಲು ಸೇಡು
ತೀರಿಸಿಕೊಳ್ಳುವುದಕ್ಕಾಗಿ ಪಾರ್ಥನನ್ನು ನೋಡಿ ಚಾಪದ
ಕೊನೆಗೆ ಮೊಗವಿಟ್ಟು ಓರೆಯಾಗಿ ನಿಂತು ಅವನಾಡಿದ ಒಂದೆರಡು
ಮಾತುಗಳನ್ನೇ ಉಪಯೋಗಿಸಿಕೊಂಡು 'ಎಲೆ ಪಾರ್ಥ,
ವೈಶ್ಯಸಂಭವರಾವಹೆವು ; ನಿಮ್ಮ ಬಲಸಮಾಜದೊಳಂಬುಗಳ್[1]
ಪಸರಮಂ ಬಿಟ್ಟು ಗೆಲವಿನಗ್ಗದ ಲಾಭಮಂ ಪಡೆದೆವು ; ಅಧಟರ
ಶಿರಂಗಳಂ ಕೊಂಡೆವು ; ಅರಸಿ ಕಲಿಗಳ್ಕೈತಂದು ಜೀವಕೆ [2]ಸಂಚ
ಕಾರಮಂ ಸಲೆ ಬೇಡಿದೊಡೆ ಕೊಟ್ಟೆವು. ಇಚ್ಛೆಯುಳ್ಳೊಡೆ ನಿನ್ನ
ತಲೆಯ ಬೆಲೆಗಿಡೆ ಸಾಹಸದ್ರವ್ಯಮೆನ್ನೊಳ್ ; ಇವರೊಳೇನಹು
ದಿನ್ನು? ವೀರನೀ ಕರ್ಣಸುತನ್, ಇವನ ತಲೆಯಂ ಸಮರ್ಪಿಸು
ಮಹಾದೇವಂಗೆ ; ತಲೆ ರುಂಡಮಾಲೆಯೊಳ್ ಪೂಜ್ಯಮಾಗಿ
ಹುದು ; ಈಶ್ವರಪ್ರೀತಿಯಹುದು ; ನಿನಗೆ ಶಿವನಂದು ಪಾಶುಪತ
ಬಾಣಮಂ ಕೊಟ್ಟುದಿಲ್ಲ ? ನಿಜಸ್ವಾಮಿಯಂ ಮರೆದಪರೆ ?
ಅಂತುಮಲ್ಲದೆ ಪಗೆಯ ಮಗನ್ನೆಸಲೇ ಕರ್ಣಜಂ ? ಸಾಕು ಇದರ
[3]ಬವಣೆಯೇತಕೆ ನಮಗೆ ? ಕಾದುವೆಯೋ ತುರಗಮಂ ಬಿಟ್ಟ
ಪೆಯೊ ಪೇಳ್. ಇವೇತಕೆ ಬರಿದೆ[4] ವೈಸಿಕದ ಬಾಣಪ್ರಯೋ
ಗಂಗಳ್ ? ಇಂದ್ರಕೀಲದೊಳ್ ಉಮಾಕಾಂತನಿಂ ಕೈಸಾರ್ದ
ಸಾಯಕವ[5]ನುಗಿ' ಎಂಬುದಾಗಿ ಮರ್ಮಭೇದಕವಾದ ಮಾತು
ಗಳನ್ನಾಡುವನು. ಈ ಸಂದರ್ಭಗಳಲ್ಲೆಲ್ಲಾ ಕವಿಯ ಬುದ್ಧಿ
ಕೌಶಲವೂ ವಾಗ್ಧೋರಣೆಯೂ ಸ್ಪಷ್ಟವಾಗಿ ಎದ್ದು ಕಾಣು
ವುವು. ವಾಚಕರು ಈ ಮೂದಲೆಗಳನ್ನು ಕೇಳಿ ಸ್ತಬ್ಧರಾಗುವರು.

---

[1] ಅಂಗಡಿ. [2] ಮುಂಗಡ. [3] ಕ್ಲೇಶ. [4] ಮೋಸ. [5] ಸೆಳೆ.

ಈ ಸಂಭಾಷಣೆಗಳೆಲ್ಲ ತಮ್ಮೆದುರಿಗೆ ನಡೆಯುವಂತೆಯೇ ತಿಳಿಯುವರು.

ಲಕ್ಷ್ಮೀಶನಿಗೆ ವೀರರಸಪ್ರತಿಪಾದನೆಯಲ್ಲಿರುವ ನೈಪುಣ್ಯವನ್ನು ಅವನ ಯುದ್ಧವರ್ಣನೆಗಳಲ್ಲಿ ನೋಡಬಹುದು. ಅಲ್ಲಿ ಎದುರಾಳಿಗಳ ಶಸ್ತ್ರಾಸ್ತ್ರಶರಸಂಧಾನ ಸತ್ತ್ವಸಾಹಸ ಲಕ್ಷ್ಯ [1]ಲಳಿ ಲಾಘವಗಳೇನು ! ಮುಂದುವರಿವಗ್ಗಳಿಕೆ ಮುಳಿಸು ಮೂದಲೆ ಮೋಡಿಗಳೇನು ! [3]ಬಂದಿ [4]ಭಾರಣೆ [5]ಬಿಂಕ [6]ಬೆಸೆ ಚಮತ್ಕಾರಗಳೇನು ! ಯೋಧರು ತಮ್ಮ ಕಡುಪರಾಕ್ರಮದಿಂದ ಪ್ರತಿಪಕ್ಷವನ್ನು

ಒತ್ತುವರ್ ಎಸುವರ್ ಎಚ್ಚ ಕಣೆಗಳಂ ಕಣೆಗಳಿಂ
ಕತ್ತರಿಸಿ ಮೆತ್ತುವರ್ ಒಡಲೊಳಂಬನ್ ಅಂಬುರೆ
ಕಿತ್ತು ಬಿಸುಡುವರ್ [7]ಅಸೃಗ್ವಾರಿಯಂ ವಾರಿಯಿಂ ತೊಳೆದೊಡನೆ ಕವಳಗೊಂಡು |
ಮತ್ತೆ ಕೈಗೆಡೆದಾರ್ದು ಬೊಬ್ಬಿಡುವರ್

ನಭಕುಪ್ಪರಿಸಿ ನೆಲಕೆ ಪಾಯ್ದೆಡಬಲಕೆ ಮುರಿದು
ರಭಸದಿಂದಾರ್ದೊರ್ವರೊರ್ವರಂ ವೀದಿರ್ದೊದಗಿ
ವಿಭವದಿಂದಖಿಳ ಶಸ್ತ್ರಾಸ್ತ್ರದಿಂ ಸಮ ವಿಷಮ ಸೋಲು ಗೆಲವುಗಳಿಲ್ಲದೆ |
ತ್ರಿಭುವನಕೆ ರಣರಂಗದೊಳ್ ಸುಭಟನರ್ತನವ
ನಭಿನಯಿಸುವಂತೆ ಲಾಘವದೃಷ್ಟಿಮುಷ್ಟಿಗಳೊಳ್
. . . ವೀರರ್ ಖತಿಯೊಳೆಚ್ಚಾಡುವರ್ ||

ಒತ್ತಿ ಬಹ ರಥಿಕರಂ ವ್ಯಥಿಕರಂ ಮಾಡುವರು
ಮುತ್ತುವ ತುರಂಗಮದ ತುಂಗ ಮದದಂತಿಗಳ
ಮೊತ್ತಮಂ ಪೋಳಾಗಿ ಸೀಳಾಗಿ ಕೆಡಹುವರು ಕೊಡಹುವರು ವಾಹಕರನು |

---

[1] ಚಟುವಟಿಕೆ. [2] ಪರಾಕ್ರಮ. [3] ಲೂಟಿ. [4] ತಡೆ, ಗಾಂಭೀರ್ಯ.
[5] ಗರ್ವ. [6] ಗರ್ವ. [7] ರಕ್ತ.

ಮತ್ತೆ ಘಟರಂಗಮಂ ಭಂಗಮಂ ಪಡಿಸುವರು
ಕತ್ತರಿಸಿ ತಲೆಗಳಂ ಕೊಲೆಗಳಂ ಕೊಂದು ಬಿಸಿ
[1]ನೆತ್ತರಂ ಪರಪುವರು . . .||

ತಲೆ ಬೀಳೆ[2]ಲಟ್ಟೆಗಳು ಕಾದುವುವು ಮೇಣಟ್ಟೆ
ನೆಲಕುರುಳೆ ತಲೆಗಳೆದ್ದಾಡುವುವು ಕೈದುಗಳ
ನಿಲುಕುವುವು ಖಂಡಿಸಿದ ತೋಳ್ಗಳ್ ಉರೆಕಡಿದ ಕಾಲ್ಗಳ್ ಮುಂದಕಡಿ
ಯಿಡುವುವು

ಈ ವರ್ಣನೆಗಳನ್ನು ಓದುತ್ತಿರುವಾಗ ಪ್ರತ್ಯಕ್ಷಾನುಭವ ಭ್ರಮೆಯಿಂದ ವಾಚಕನು ಮೈಮರೆಯುವನು. ರೋಮಾಂಚಿತನಾಗುವನು. ಪಂದೆ ಪುಲಿಯಾಗುವನು. ಭೀರುವು ಶೂರನಾಗುವನು. ಎಂದ ಮೇಲೆ ಇದನ್ನು ಒಂದುಸಲ ಸ್ವತಃ ಓದಿದ ಮೇಲೆ ಅಥವಾ ಓದಿಸಿ ಸರಿಯಾಗಿ ಅರ್ಥಮಾಡಿಕೊಂಡ ಮೇಲೆ ಅದನ್ನು ಪುನಃ ಓದಬೇಕು ಅಥವಾ ಕೇಳಬೇಕೆಂಬಾಸೆ ಇಲ್ಲದಿರುವುದು ತಾನೆ ಹೇಗೆ?

ಲಕ್ಷ್ಮೀಶನ ಗ್ರಂಥವು ಶೃಂಗಾರರಸಯುಕ್ತವಾಗಿರುವುದು ಅದು ಜನರ ಮೆಚ್ಚಿಗೆಗೆ ಪಾತ್ರವಾಗಿರುವುದಕ್ಕೆ ಮತ್ತೊಂದು ಕಾರಣ. ಸಾಮಾನ್ಯವಾಗಿ ಶೃಂಗಾರವು ವಿಶ್ವಮೋಹಕವಾದ ರಸ. ಸಂಸ್ಕೃತ .ಜೈಮಿನಿಭಾರತದಲ್ಲಿ ಅನೇಕ ಶೃಂಗಾರ ಸನ್ನಿವೇಶಗಳಿದ್ದರೂ ಅವುಗಳು ಅಲ್ಲಿ ವಿಸ್ತೃತವಾಗಿಲ್ಲ. ಲಕ್ಷ್ಮೀಶನು ತನ್ನ ಕಾವ್ಯವನ್ನು ಮಹಾಕಾವ್ಯವನ್ನಾಗಿಯೂ ಸರ್ವದಾರಣೀಯವನ್ನಾಗಿಯೂ ಮಾಡಬೇಕೆಂಬ ಉದ್ದೇಶದಿಂದ ಭಕ್ತಿರಸಪ್ರಧಾನವಾದ ತನ್ನ ಕಾವ್ಯದ ಮಧ್ಯೆಮಧ್ಯೆ ಶೃಂಗಾರರಸ ಪ್ರತಿಪಾದಕಗಳಾದ ಸ್ತ್ರೀಯ ಆಕಾರವರ್ಣನೆ, ಶೀಲವರ್ಣನೆ, ರಾತ್ರಿಯವರ್ಣನೆ, ವೇಶ್ಯಾವಾಟಿಯವರ್ಣನೆ, ವಿರಹವರ್ಣನೆ

[1] ರಕ್ತ. [2] ಮುಂಡ.

ಚಂದ್ರೋದಯವರ್ಣನೆ, ಋತುವರ್ಣನೆ ಮೊದಲಾದುವುಗಳನ್ನು ಸೇರಿಸಿದ್ದಾನೆ. ದೀರ್ಘವಾಗಿ ಬೆಳಸಿದ್ದಾನೆ. ಕನ್ನಡ ಜೈಮಿನಿ ಭಾರತದಲ್ಲಿ ಬರುವ ಇಂತಹ ವರ್ಣನೆಗಳೆಲ್ಲ ಸಾಮಾನ್ಯವಾಗಿ ಲಕ್ಷ್ಮೀಶನದೆಂದೇ ಹೇಳಬಹುದು. ಈ ಸನ್ನಿವೇಶಗಳಲ್ಲೆಲ್ಲ ಅವನ ಪಾಂಡಿತ್ಯಪ್ರಭಾವವು ಪ್ರಧಾನವಾಗಿ ಅವನನ್ನು ಶಬ್ದಚಿತ್ರಗಳಲ್ಲಿ ತೊಡಗುವಂತೆ ಮಾಡಿ ವಾಚಕರಿಗೆ ಬೇಸರಿಕೆಯನ್ನುಂಟುಮಾಡುತ್ತದೆ. ಆದರೆ ಸ್ವಭಾವವಾಗಿ ಬರೆದೆಡೆಗಳಲ್ಲಿ ಶೃಂಗಾರವರ್ಣನೆಗಳು ಮನೋಜ್ಞವಾಗಿವೆ; ತಿಳಿಯಾಗಿವೆ; ಆಭಾಸವಿಲ್ಲದುವಾಗಿವೆ. ಸುಧನ್ವನು ಯುದ್ಧಕ್ಕೆ ಹೊರಡಲು ಸಿದ್ಧನಾಗುತ್ತಿರುವಾಗ ಅವನನ್ನು ಹುಡಕಿಕೊಂಡು ಬಂದ ಅವನ ರಾಣಿಯಾದ ಪ್ರಭಾವತಿಯು ಅವನಿಗೆ ಹೀಗೆ ಕಂಡಳಂತೆ :—

ಚಂದ್ರಮಂಡಲಸದೃಶವದನದೆಳನಗೆಯ ನವ
[1]ಚಂದ್ರಿಕೆಯೆನಲ್ [2]ಮೇಲುದಿನ ದುಕೂಲಂ ಮೆರೆಯೆ
ಚಂದ್ರಕತಿಲಕದ[3]ರಾಗಂ ಚಿತ್ತದನುರಾಗಮಂ ಸೂಚಿಪಂತೆ ಸೊಗಸೆ |
ಇಂದ್ರನೀಲದಮಣಿಯ ಮಿರುಗುವ ಲಲಿತಕಾಂತಿ
ಸಾಂದ್ರಮಾದವೊಲೆಸೆ[4]ವಳಕಪಾಶದಿಂದ ನಯ
ನೇಂದ್ರಿಯವನುರೆ ಕಟ್ಟಿ ಕೆಡಪದಿರಳೆಂಬಿನಂ ರಂಜಿಸಿದಳಾ ಮೃಗಾಕ್ಷಿ ||

ಮುಡಿಯ ಪೊಸಮಲ್ಲಿಗೆಯ ಸೂಸುವೆಳನಗೆಯ ಸವಿ
ನುಡಿಯ [5]ಬಾಯ್ದೆರೆಯ ಹೊಳೆಹೊಳೆವ ದಶನದ ಮಿಸುಪ
ಕಡೆಗಣ್ಣ ತೊಳಗುವ ನಖಾವಳಿಯ ಥಳಥಳಿಪ ಕಂಠಮಾಲೆಯ ಮುತ್ತಿನ |
[6]ತೊಡವುಗಳ [7]ಘನಸಾರದನುಲೇಪನದ ಸಣ್ಣ
ಮಡಿ[8]ದುಕೂಲದ [9]ಬೆಳ್ಪೊಗರ್ ಕೋಮಲಾಂಗದೊಳ್
ಬಿಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ [10]ಪುತ್ತಳಿವೊಲವಳೆಸೆದಳು ||

---

1 ಬೆಳದಿಂಗಳು. 2 ಹೊದಿಕೆ. 3 ಕೆಂಪುಬಣ್ಣ. 4 ಮುಂಗುರುಳು. 5 ತುಟಿ. 6 ಆಭರಣ. 7 ಶ್ರೀಗಂಧ. 8 ರೇಷ್ಮೆಯ ವಸ್ತ್ರ. 9 ಬಿಳಿಯ ಕಾಂತಿ. 10 ಬೊಂಬೆ.

ಕರಯುಗದೊಳಾಂತ ಪೊಂದಟ್ಟೆಯನದರ ಮೇಲೆ
ಪರಪಿರ್ದ ಸಂಪಗೆಯ ಪೂಗಳಂ ತನ್ನ ಮೆ
ಯ್ಯೊರೆಗೆ ಸರಿಯಾದಪುವೆ ನೋಡೆಂದು ತೋರ್ಪಂತೆ ಕೊಂಡು ಬಂದಿದಿರೆ ನಿಂದ|
ತರಳೆಯಂ ಕಡೆಗಣ್ಣೊಳೊಯ್ಯನೀಕ್ಷಿಸಿ[1] ನಗುತ
ಸರಸ ನವ್ಯ ಪರಿಮಳಕುಸುಮಂಗಳಂ ಕೊಂಡನು . . .

ಶ್ರೀರಾಮನಿಗೆ ವಸಂತಲಕ್ಷ್ಮಿಯಂತೆ ಕಂಡ ಸೀತಾದೇವಿಯ ವರ್ಣನೆಯಿದು.

ಮಲ್ಲಿಕಾಸ್ಮಿತರುಚಿರೆ ಕುಂದಕುಟ್ಮಲರದನೆ
ಪಲ್ಲವಾಧರೆ ಭೃಂಗಕುಂತಳೆ ಕುಸುಮಗಂಧಿ
ಸಲ್ಲಲಿತ ಕೋಕಿಲಾಲಾಪೆ ಚಂಪಕವರ್ಣೆ ಮೃದುಮಧುರ ಕೀರವಾಣಿ|
ಫುಲ್ಲಲೋಚನೆ ಚಾರುಚಂದ್ರಬಿಂಬಾನನೆ ಲ
ಸಲ್ಲತಾಗಾತ್ರೆ ಜಾನಕಿ ವಿರಾಜಿಸಿದಳ್ ಸ
ಮುಲ್ಲಾಸದಿಂ ಪುಷ್ಪವತಿಯಾಗಿ ವಿಕಸಿತ ವಸಂತಲಕ್ಷ್ಮಿಯ ತೆರದೊಳು||

---

## ಜೈಮಿನಿಭಾರತದಲ್ಲಿ ಹಾಸ್ಯರಸ

ಜೈಮಿನಿಭಾರತವು ಹಾಸ್ಯರಸಭರಿತವಾದ ಗ್ರಂಥ. ಅಲ್ಲಿ ಹಾಸ್ಯಯುಕ್ತವಾದ ಸನ್ನಿವೇಶಗಳು ಅನೇಕವಿವೆ. ಜೈಮಿನಿಯು ಹಾಸ್ಯಪ್ರಿಯ, ರಸಿಕ. ತಾನೂ ನಕ್ಕು ಇತರರನ್ನೂ ನಗಿಸಬಲ್ಲ ಶಕ್ತಿಯುಳ್ಳವನು. ಹಾಸ್ಯ ಸನ್ನಿವೇಶಗಳನ್ನು ನೀರು ಕುಡಿದ ಹಾಗೆ ಸರಾಗವಾಗಿ ಬೆಳೆಸಬಲ್ಲ ಶಕ್ತಿ ಆತನಲ್ಲಿದೆ. ಅಲ್ಲದೆ, ಎಂತಹ ಸನ್ನಿವೇಶಗಳಲ್ಲಿ ಯಾವ ತೆರನಾದ ವ್ಯಕ್ತಿಗಳಿಂದ ಹಾಸ್ಯವು ಪ್ರಯತ್ನವಿಲ್ಲದೆ ಹೊರಡಬಲ್ಲದೆಂಬುದು ಅವನಿಗೆ ಗೊತ್ತು. ಮಹಾಭಾರತದ ವ್ಯಕ್ತಿಗಳಲ್ಲೆಲ್ಲ ಪರಾಕ್ರಮದ

[1] ನಿಧಾನವಾಗಿ.

ಮೂರ್ತಿಯಾದ ಭೀಮನ ಆಕಾರ, ವಜ್ರೋಪಮವಾದ ಅವನ ಗದೆ, ಅವನ ಮುಂಗೋಪ, ಅವನ ಸ್ವಾಭಿಮಾನ—ಇವು ಎಂತಹವರಿಗಾದರೂ ನಗುವನ್ನುಂಟುಮಾಡುವುವು. ಇದರ ಗುಟ್ಟನ್ನು ತಿಳಿದ ಜೈಮಿನಿಯು ಭೀಮನನ್ನು ರೇಗಿಸಿ ಅವನಿಗೂ ಕೃಷ್ಣನಿಗೂ ವಾಗ್ಯುದ್ಧ ನಡೆಯುವ ಹಾಗೆ ಮಾಡಿ ಎರಡು ಹಾಸ್ಯಸನ್ನಿವೇಶಗಳನ್ನು ಕಲ್ಪಿಸಿದ್ದಾನೆ. ಲಕ್ಷ್ಮೀಶನು ಈ ಸಂದರ್ಭಗಳನ್ನೇ ಉಪಯೋಗಿಸಿಕೊಂಡಿದ್ದರೂ ಅವುಗಳನ್ನು ಬೆಳಸಿ ವಿವರಗಳಲ್ಲಿ ವ್ಯತ್ಯಾಸಮಾಡಿ ಹೊಸ ಉಪಮಾನಗಳನ್ನು ಸೇರಿಸಿ ಹೆಚ್ಚು ಆಹ್ಲಾದಕರವನ್ನಾಗಿ ಮಾಡಿದ್ದಾನೆ. ಇವುಗಳಲ್ಲಿ ಮೊದಲನೆಯದು ಧರ್ಮರಾಯನು ಅಶ್ವಮೇಧಯಾಗವನ್ನು ನಡೆಸುವುದಕ್ಕೆ ಕೃಷ್ಣನ ಅಭಿಮತವನ್ನು ಕೇಳುವ ಸಂದರ್ಭ. ಎರಡನೆಯದು ಧರ್ಮರಾಯನ ಆಜ್ಞೆಯ ಪ್ರಕಾರ ಭೀಮನು ಕೃಷ್ಣನನ್ನು ಕರೆತರಲು ದ್ವಾರಕಾಪಟ್ಟಣಕ್ಕೆ ಹೋದ ಸನ್ನಿವೇಶ. ಈ ಎರಡು ಸನ್ನಿವೇಶಗಳಲ್ಲಿಯೂ ಭೀಮನ ಸ್ವಾಭಿಮಾನ ಪೂರ್ಣವಾದ ವಾಗ್ಜೋರಣೆಯೂ ಸರಸವೂ ಹಾಸ್ಯಯುಕ್ತವೂ ಆದ ಕೃಷ್ಣನ ಪ್ರತ್ಯುತ್ತರವೂ ಆಕರ್ಷಕವಾಗಿವೆ. ಎರಡನೆಯ ಸನ್ನಿವೇಶದಲ್ಲಿ ಕವಿಯು ಕೃಷ್ಣನ ಸಾಂಸಾರಿಕ ಚಿತ್ರವನ್ನು ವಾಚಕರ ಮುಂದಿಟ್ಟು ದೇವಕಿ ಸತ್ಯಭಾಮೆಯರ ಸಂಭಾಷಣೆಯ ಮೂಲಕ ಹಾಸ್ಯದ ಹೊನಲನ್ನು ಹರಿಸಿದ್ದಾನೆ.

ಇವುಗಳಿಗಿಂತ ಚಂಡಿಯ ಕಥೆಯಲ್ಲಿ ಬರುವ ಹಾಸ್ಯವು ಹೃದಯಗ್ರಾಹಿಯಾದುದು. ಪ್ರತಿಕೂಲದಾಂಪತ್ಯದ ಸನ್ನಿವೇಶವು ಅಲ್ಲಿ ಚಿತ್ರಿತವಾಗಿದೆ. ಅಲ್ಲಿಯ ಹಾಸ್ಯವು ಕಟುತರವೇ ಅಲ್ಲದೆ ಕಥೆಯ ವ್ಯಕ್ತಿಗಳಲ್ಲಿ ವಾಚಕರಿಗೆ ಪೂರ್ಣ ಸಹಾನುಭೂತಿಯನ್ನುಂಟುಮಾಡುವಹಾಗಿದೆ. ಈ ಭಾಗವೂ ಮೂಲದ ಅನುವಾದ ಮಾತ್ರವೇ ಆದರೂ ಮೂಲದಲ್ಲಿ ವಿಸ್ತಾರವಾಗಿ

ವರ್ಣಿತವಾಗಿರುವ ಚಂಡಿಯ ಉಪದ್ರವವನ್ನೂ ಚಂಡಿಯ ವಿವಾಹಕಾಲದಲ್ಲಿಯೇ ಅವಳ ಸ್ವಭಾವವು ಉದ್ದಾಲಕನಿಗೆ ತಿಳಿದಿತ್ತೆಂಬಂಶವನ್ನೂ ಲಕ್ಷ್ಮೀಶನು ಬಿಟ್ಟಿರುವುದರಿಂದ ಕನ್ನಡ ಗ್ರಂಥದಲ್ಲಿ ಈ ಭಾಗವು ಮೂಲಕ್ಕಿಂತ ಹೆಚ್ಚು ಸ್ವಾರಸ್ಯವಾಗಿದೆ. ಅದರ ರಸಾಸ್ವಾದನೆಗಾಗಿ ಕವಿಯ ಮಾತಿನಲ್ಲಿಯೇ ಅದನ್ನು ಮುಂದೆ ಕೊಟ್ಟಿದೆ.

ಆಲಿಸರ್ಜುನ ಮುನ್ನ ವಿಪ್ರನುಂಟೊರ್ವನು
ದ್ದಾಲಕಾಖ್ಯಂ ತಿಳಿದನಖಿಳ ಶಾಸ್ತ್ರಂಗಳಂ
ಮೇಲೆ ವೈವಾಹದೊಳ್ ವಧುವಾದಳಾತಂಗೆ ಚಂಡಿಯೆಂಬಾಕೆ ಬಳಿಕ |
ಕಾಲಕಾಲದ ಜಪಾನುಷ್ಠಾನ ಪೂಜೆಗಳಿ
ಗಾಲಸ್ಯಮಂ ಮಾಡದೆನ್ನ [1]ಪರಿಚರ್ಯೆಗನು
ಕೂಲೆಯಾಗಿರ್ದು ಮನೆವಾರ್ತೆಯಂ ಸಾಗಿಪುದು ನೀನೆಂದೊಡಿಂತೆಂದಳು ||

ಎಳ್ಳನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆ
ಗೊಳ್ಳದಿರ್ ಪರಿಚರ್ಯೆ ಮನೆವಾರ್ತೆಯೆಂದೆಂಬ
[2]ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂದಾ ಚಂಡಿ [3]ಚಂಡಿಪೋರೆ |
[4]ಮುಳ್ಳಿಡಿದ ಮರನೇರಿದಂತಾದುದಿತುಪರಕಿ
ದೊಳ್ಳಿತಾದಪುದೆ ಬಂದುದು ತಪೋಹಾನಿಯೆಂ
ದಳ್ಳೆಯೊಳ್ ಕೋಲ್ಕೊಂಡ ತೆರದೊಳುದ್ದಾಲಕಂ ಚಿಂತಿಪಂ ಪ್ರತಿದಿನದೊಳು ||

ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವಮುನಿ
ಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ
ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊಡವಳ ಪ್ರತಿಕೂಲತೆಯನು |
[5]ಅಂತರಿಸದೆಲ್ಲಮಂ ಪೇಳ್ದೊಡವನಿದಕೆ ನೀಂ
ಮುಂತೆ [6]ವಿಪರೀತಮಂ ಮಾಡಲಾದಪುದೆಂದು
ಸಂತಾಪಮಂ ಬಿಡಿಸಿ ಬೀಳ್ಕೊಂಡವಂ ತೀರ್ಥಯಾತ್ರೆಗೈದಿದನಿತ್ತಲು ||

---

[1] ಸೇವೆ. [2] ಗೋಜು. [3] ಹಟಹಿಡಿಯಲು. [4] ಮುಳ್ಳಿನಿಂದ ತುಂಬಿದ. [5] ಮರೆಮಾಚದೆ. [6] ವ್ಯತ್ಯಾಸಮಾಡುವುದು.

ಉದ್ದಾಲಕಂ ಬಳಿಕ ತನ್ನ ಮಂದಿರದೊಳಿರು
ತಿದ್ದ ಸಮಯಕೆ ಪಿತೃಶ್ರಾದ್ಧ ದಿವಸಂ ಬಂದೊ
ಡೆದ್ದು ಚಂಡಿಯೊಳೆಲೆಗೆ ನಾಳೆ ಪೈತೃಕಮದಂ ನಾಡಿದಲ್ಲದೆ ಮಾಡೆನು |
ಕದ್ದು ತಹೆನಧಮಧಾನ್ಯ[1]ವ್ರೀಹಿ[2]ಶಾಕಮಂ
ಪೊದ್ದಲೀಯೆಂ ಶುದ್ಧವಸ್ತುಗಳನೊಂದುಮಂ
ತದ್ದಿನಕೆ ಮರುದಿವಸದೊಳ್ ಪೇಳ್ದು ಬಹೆನಪಾತ್ರಂಗೆಂದೊಡಿಂತೆಂದಳು ||

ನಾಳೆ ಮಾಡಿಸುವೆನಾಂ ಪೈತೃಕಮನುತ್ತಮದ
ಶಾಲಿ ಧಾನ್ಯ ವ್ರೀಹಿ ಶಾಕಮಂ ಕೊಂಡು ಬಹೆ
ನಾಲಯುವನತಿಶುದ್ಧವಾದ ವಸ್ತುಗಳಿನಲ್ಲದೆ ಕೂಡೆ[3]ನಳ್ತಿಯಿಂದ |
ಪೇಳಿಸುವೆನಂದಿನದಿನದ ಮೊದಲರಾತ್ರಿಯೆ ವಿ
ಶಾಲಗುಣಸಂಪನ್ನ ವೇದಪಾರಗ ಸು
ಶೀಲರಹ ಸತ್ಪಾತ್ರ[4]ದವನಿಯಮರರ್ಗೆನಲ್ ಚಂಡಿಗವನಿಂತೆಂದನು ||

ಆದೊಡೆ [5]ಕುತಪಕಾಲಮಂ ಬಿಡುವೆನರ್ಚನೆಯೊ
ಳಾದರಿಸೆನಾಂ ಬಂದ ವಿಪ್ರರಂ ಪಾಕದ ನ
ಪೋದನ ಸುಪಾಯಸ ಗುಡಾಜ್ಯ ಮಧು ತೈಲ ಮೃದುಭಕ್ಷ್ಯ ಭೋಜ್ಯಾದಿಗಳನು ||
ಸ್ವಾದುಫಲ ಶರ್ಕರ ವಿನುತ ಶಾಕ ನಿರ್ಮಲ ಪ
ಯೋದಧಿಗಳಂ [6]ಸಕುತ್ಸಿತಮಾಗದಂತೆ ಸಂ
ಪಾದಿಸಿ ಪಿತೃಶ್ರಾದ್ಧಮಂ ಮಾಡಿ ವಸ್ತ್ರ ದಕ್ಷಿಣೆಗಳಂ ಕೊಡೆನೆಂದನು ||

ಎಂದೊಡೆ ಕುತುಪಕಾಲಮಂ ಮೀರಲೀಯೆನಾಂ
ಬಂದ ವಿಪ್ರರನಾದರಿಸಿ ಪೂಜೆಗೆಯ್ಯದಿರೆನ್
ಇಂದೊಲ್ಲೆನೆಂ[7]ದೊಕ್ಕಣಿಸಿದನಿತನೆಲ್ಲಮಂ ಸಂಪಾದಿಸದೆ ಮಾಣೆನು |
ತಂದಮಲವಸ್ತು ತಾಂಬೂಲ ವಸ್ತ್ರದಕ್ಷಿಣೆಗ
ಳಿಂದ ಸತ್ಕರಿಸಿ ಕಳುಹಿಸದೆ ಬಿಡೆನೆನುತ ನಲ
ವಿಂದೊದವಿಸಿದಳಖಿಳ ಸದ್ರವ್ಯಮಂ ಬಳಿಕ ಚಂಡಿ ಪಾಕಂಗೆಯ್ದಳು ||

---

[1] ಬತ್ತ. [2]. ಕಾಯಿಪಲ್ಯ. [3] ಪ್ರೀತಿ. [4] ಬ್ರಾಹ್ಮಣರು. [5] ಶ್ರಾದ್ಧಕ್ಕೆ ಯೋಗ್ಯವಾದ ಕಾಲ (ಅಪರಾಹ್ಣ). [6] ದೋಷದಿಂದ ಕೂಡಿರುವುದು. [7] ವಿವರಿಸು.

ಕಂಡನೀ ತೆರನನುದ್ದಾಲಕಂ ಸಂತಸಂ
ಗೊಂಡು ಮನದೊಳ್ ಪೊರಗೆ ತಾನೊಪ್ಪದವನಾಗಿ
ಚಂಡಿ ಪೇಳಿದವೊಲಾ ಶ್ರಾದ್ಧಮಂ ಮಾಡಿ ಸಂಪ್ರೀತಿಯಿಂ ವಿಪರೀತದ |
ತೊಂಡುತೊಳಸಂ ಮರೆದು ಕರ್ಮಾಂಗವಾಗಿರ್ದ
ಪಿಂಡಮಂ ತೆಗೆದು ಮಡುವಿನೊಳೆ ಹಾಯ್ಕೆಂದೊ[1]ಡು
ದ್ದಂಡದಿಂದೆತ್ತಿ ಬೀದಿಗೆ ಬಿಸುಡಲಾ ದ್ವಿಜಂ ರೋಷ[2]ಭೀಷಣನಾದನು ||

ಎಲಗೆ ನಿನ್ನೊಡನೆ ನಾನೇಂ ಹರಿಯಹೋರುವೆಂ
ಛಲತನ್[3]ಕಲಸಿದೆ ನೀ[4]ನರೆಯಾಗಿಹೋಗೆಂದು
ಸಲೆ ಮುಳಿದು ಶಾಪಮಂ ಕೊಟ್ಟು ಕಾರುಣ್ಯದಿಂದಾ ದ್ವಿಜಂ ಕೂಡೆ ತಿಳಿದು |
ಕೆಲವು ಕಾಲಕೆ ನಿನ್ನೊ[5]ಳಧ್ವರಹಯಂ ಬಂದು
ನಿಲಲರ್ಜುನಂ ಬಿಡಿಸಿದೊಡೆ ಮೋಕ್ಷಮಹುದೆಂದು
ತೊಲಗಿದಂ ಸಂನ್ಯಾಸಕವನತ್ತಲವನಿಯೊಳ್ ಕಲ್ಲಾದಳಿವಳಿತ್ತಲು ||

ಮೇಲೆ ಸೂಚಿಸಿರುವ ಸನ್ನಿವೇಶಗಳು ಮಾದರಿಗಾಗಿ ಮಾತ್ರ. ಇಂತಹವು ಗ್ರಂಥದಲ್ಲಿ ಅನೇಕ ಕಡೆ ಬರುವುವು. ಕೃಷ್ಣ ಸತ್ಯಭಾಮೆಯರ ಸಂವಾದ, ದ್ರೌಪದಿ-ಸತ್ಯಭಾಮೆಯರ ಸಲ್ಲಾಪ, ಪ್ರದ್ಯುಮ್ನ ಅನುಸಾಲ್ವರ ಯುದ್ಧ, ವೃಷಕೇತು ಬಭ್ರುವಾಹನರ ಮೂದಲೆ—ಮೊದಲಾದ ಅನೇಕ ಸಂದರ್ಭಗಳಲ್ಲಿ ಉತ್ತಮ ಹಾಸ್ಯವು ಉಕ್ಕಿ ಹರಿದು ಕಾವ್ಯದ ಸ್ವಾರಸ್ಯವನ್ನು ಹೆಚ್ಚಿಸುವುದು.

---

[1] ಅಹಂಕಾರ. [2] ಭಯಂಕರ. [3] ಅಸಹ್ಯಪಟ್ಟೆ. [4] ಕಲ್ಲು. [5] ಯಜ್ಞದ ಕುದುರೆ.

# ಲಕ್ಷ್ಮೀಶನ ಕಾವ್ಯಮಾರ್ಗ ಮತ್ತು ಶೈಲಿ

ಲಕ್ಷ್ಮೀಶನ ಕಾವ್ಯವು ಉತ್ತಮಗುಣಗಳಿಂದ ಕೂಡಿದ್ದರೂ ಅದು ವಿಶೇಷವಾಗಿ ಜನಪ್ರಿಯವಾಗಿದ್ದರೂ ಶುದ್ಧ ಕವಿತಾದೃಷ್ಟಿಯಿಂದ ಅದು ಪಂಪ, ರನ್ನ, ನಾರಾಣಪ್ಪನ ಗ್ರಂಥಗಳ ಮಟ್ಟಕ್ಕೆ ಏರಲಾರದೆಂದು ಅನೇಕ ವಿಮರ್ಶಕರ ಅಭಿಪ್ರಾಯ. ಇದು ಬಲುಮಟ್ಟಿಗೆ ನಿಜವೂ ಹೌದು. ಇದಕ್ಕೆ ಲಕ್ಷ್ಮೀಶನ ಕವಿತಾಶಕ್ತಿಯ ಅಭಾವವು ಕಾರಣವಲ್ಲ; ಆ ಕಾಲದ ಕಾವ್ಯಮಾರ್ಗವೂ ಜನಗಳ ಅಭಿರುಚಿಯೂ ಕಾರಣ. ಕಾವ್ಯಮೀಮಾಂಸಾ ಚರಿತ್ರೆಯನ್ನು ಸ್ವಲ್ಪ ವಿಚಾರಮಾಡಿ ನೋಡಿದರೆ ಕಾಲವ್ಯತ್ಯಾಸವಾದಹಾಗೆಲ್ಲ, ಅಭಿರುಚಿಯು ಮಾರ್ಪಾಡಾದಹಾಗೆಲ್ಲ ಕಾವ್ಯದ ಸ್ವರೂಪವೂ ಧ್ಯೇಯವೂ ವ್ಯತ್ಯಾಸವಾಗುತ್ತಿರುವುದು ಕಂಡುಬರುವುದು. ಆದುದರಿಂದಲೇ ಲಾಕ್ಷಣಿಕರಲ್ಲಿ ಕಾವ್ಯದ ವಿವರಣೆಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿ ಶಬ್ದ, ಅರ್ಥ, ಗುಣ, ರೀತಿ, ರಸ, ಅಲಂಕಾರ, ಚಮತ್ಕಾರ, ಧ್ವನಿ ಇವುಗಳಲ್ಲಿ ಒಂದೊಂದಕ್ಕೆ ಒಂದೊಂದು ಕಾಲದಲ್ಲಿ ಪ್ರಾಮುಖ್ಯವುಂಟಾಗಿದೆ. ಪ್ರತಿಯೊಬ್ಬ ಕವಿಯೂ ತನ್ನ ಕಾಲದ ಅಭಿರುಚಿಗನುಗುಣವಾಗಿ ಮೇಲಿನ ಅಂಶಗಳಲ್ಲಿ ಒಂದನ್ನು ಮುಖ್ಯ ಗುರಿಯಾಗಿಟ್ಟುಕೊಂಡು ಆ ದೃಷ್ಟಿಯಿಂದಲೇ ಕಾವ್ಯವನ್ನು ರಚಿಸುವನು. ಅವನ ಗ್ರಂಥದಲ್ಲಿ ಆ ಒಂದಂಶಕ್ಕೆ ಹೆಚ್ಚು ಪ್ರಾಶಸ್ತ್ಯವು ದೊರೆತು ಉಳಿದುವು ಸಾಮಾನ್ಯ ಸ್ಥಾನವನ್ನು ಪಡೆಯುವುವು. ಆದುದರಿಂದ ವಿಮರ್ಶಕನು ಯಾವ ಗ್ರಂಥವನ್ನು ವಿಮರ್ಶೆ ಮಾಡಬೇಕಾದರೂ ಸಹೃದಯನಾಗಿ ಕವಿಯ ದೃಷ್ಟಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಆ ಕಾಲದಲ್ಲಿ ಪ್ರಚಾರದಲ್ಲಿರುವ ಕಲಾಪದ್ಧತಿಯ ಮರ್ಮವ

ನ್ನರಿತು ತನ್ನಲ್ಲಿರಬಹುದಾದ ಆಗ್ರಹವನ್ನುಳಿದು ವಿಮರ್ಶೆಮಾಡ ಬೇಕು. ಕವಿಯು ಅಂಗೀಕರಿಸಿರುವ ಉದ್ದೇಶದೃಷ್ಟಿಯಿಂದ ಅವನು ಎಷ್ಟರಮಟ್ಟಿಗೆ ಕೃತಕೃತ್ಯನಾಗಿರುವನೆಂದು ನೋಡು ವುದು ವಿಮರ್ಶಕನ ಕರ್ತವ್ಯ. ಈ ದೃಷ್ಟಿಯಿಂದ ನೋಡಿದರೆ ಲಕ್ಷ್ಮೀಶನ ಕಾವ್ಯಮಾರ್ಗವು ನಮಗೆ ಸುಲಭವಾಗಿ ಅರ್ಥ ವಾಗುವುದು.

ಲಕ್ಷ್ಮೀಶನು ಪಂಡಿತ. ಪ್ರಾಚೀನ ಸಂಪ್ರದಾಯವನ್ನು ಸ್ವಲ್ಪವೂ ಬಿಡದೆ ಪಾಲಿಸಿದವನು. 'ನಡೆದುದೆ ಮಾರ್ಗಂ, ಪದಮಿಡಲೊಡರಿಸಿದುದೆ ಭಂಗಿ' ಎಂದಾಗಲಿ 'ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ, ಪದಮಿಟ್ಟಳಿಸದೊಂದಗ್ಗಳಿಕೆ' ಎಂದಾ ಗಲಿ ಹೊರಟವನಲ್ಲ. ಅವನ ಅಭಿಪ್ರಾಯಗಳು ಸಂಸ್ಕೃತ ವಾದುವು. ಅವನಿಗೆ ಮೂಲವಾಗಿರುವುದು ಪೂಜ್ಯವಾದ ಸಂಪ್ರದಾಯಬದ್ಧವಾದ ಪುರಾಣ. ಅವನ ಪದಾರ್ಥಗಳು ಕ್ರಮಬದ್ಧವಾದುವು. ಅಲಂಕಾರ, ವೃತ್ತಿ, ರೀತಿ,—ಎಲ್ಲವೂ ನಿಷ್ಕೃಷ್ಟವಾದ ಪರಿಣಾಮವುಳ್ಳವು. ಲಾಕ್ಷಣಿಕವಲ್ಲದ ಪದ ಪ್ರಯೋಗಗಳಾಗಲಿ ರೂಢವಲ್ಲದ ವಿವರಣೆಯ ರೀತಿಯಾಗಲಿ ಅವನಲ್ಲಿ ಸಿಕ್ಕಲಾರವು. ಅವನದು ಮೃಗರಾಜನ ಔದಾಸೀನ್ಯ ದಿಂದ ಕೂಡಿದ ಸ್ವೇಚ್ಛಾವಿಹಾರವಲ್ಲ. ಸುಶಿಕ್ಷಿತವಾದ ಪೆಗು ಟಾಕಣದ ಕ್ರಮವರಿತ ಸಿಬ್ಬಣದ ನಡಿಗೆ. ಹಿಮವತ್ಪರ್ವತದ ಬೆಟ್ಟಗುಡ್ಡಗಳಿಂದ ಧುಮುಕಿ ಕೂಲಗಳನ್ನಪ್ಪಳಿಸಿ ಭೋರ್ಗ ರೆದು ನಾನಾಮುಖವಾಗಿ ಹರಿಯುವ ಗಂಗಾಸ್ರೋತವಲ್ಲ. ಸಮಸ್ಥಳದಲ್ಲಿ ಗಂಭೀರವಾಗಿ ಹರಿಯುವ ಕಾಳಿಂದಿಯ ಹೊನಲು. ಅದೊಂದು ವಿಜಯದಶಮಿಯ ಮೆರವಣಿಗೆ. ಅಲ್ಲಿಯ ಭಾಗಗಳು, ಬಣ್ಣ, ಉಡುಪು, ಧ್ವನಿ ಎಲ್ಲದರಲ್ಲಿಯೂ ಒಂದು ಶಿಸ್ತಿದೆ; ಬೆಡಗಿದೆ. ಇವುಗಳಲ್ಲಿ ವೈವಿಧ್ಯವಿಲ್ಲದಿರ

ಬಹುದು ; ಕೃತಕವಾಗಿ ಕಾಣಬಹುದು : ಆದರೆ ಅವು ಉದ್ದೇಶ ಪೂರ್ವಕವಾಗಿ ಹಾಗೆಯೇ ಆಗಬೇಕೆಂದು ಏರ್ಪಡಿಸಿದವು.

ಈ ವಿಷಯವನ್ನು ಲಕ್ಷ್ಮೀಶನು ತನ್ನ ಗ್ರಂಥದ ಪ್ರಾರಂಭ ದಲ್ಲಿಯೇ ವಿಶದಪಡಿಸಿದ್ದಾನೆ. ಅವನ ಕಾವ್ಯಪ್ರಬಂಧವು—

ಪಾರದೆ ಪರಾರ್ಥಮಂ ವರಯತಿಗೆ ಭಂಗಮಂ
ತಾರದೆ ನಿಜಾನ್ವಯಕ್ರಿಯೆಗಳ್ಗೆ ದೂಷಣಂ
ಬಾರದೆ ವಿಶೇಷಗುಣಗಣ ಕಲಾಗೌರವಂ ತೀರದೆ ದುರುಕ್ತಿಗಳ್ಗೆ |
ಸೇರದೆ ಸುಮಾರ್ಗದೊಳ್ ನಡೆವ ಸತ್ಪುರುಷನ ಗ
ಭೀರದೆಸಕವ ಪೋಲ್ವ ಸತ್ಕೃತಿ.

ಅದು ಛಂದಸ್ಸು, ಅಲಂಕಾರ, ಭಾವ, ರಸಗಳೊಂದಿಗೆ ಕೂಡಿದ ಕಲೆವೆತ್ತ ಸತ್ಕೃತಿ. ಅದು—

ವರವರ್ಣದಿಂದ ಶೋಭಿತಮಾಗಿ ರೂಪ ವಿ
ಸ್ತರದಿಂದ ಚೆಲ್ವಾಗಿ ಮಧುರತರ ನವರಸೋ
ದರಭರಿತದಿಂದ ವಿಲಸಿತಮಾಗಿ ಸುಮನೋನುರಾಗದಿಂ ಪ್ರಚುರಮಾಗಿ |
ನಿರುತಮಂಜುಳ ಶಬ್ದದಿಂದ ಕಿವಿಗಿಂಪಾಗಿ
ಚರಿಸುವ ಸುಲಲಿತ ಷಟ್ಪದಿಗಳೆಡಬಿಡದೆ ಜೇಂ
ಕರಿಸುವ . . . ವಿದ್ವತ್ಸಭಾ[1]ಸರೋರುಹಾಕರಂ ||

ಅಲ್ಲದೆ ಅದು 'ಚದುರಪದಹತಿಯ ಸರಸಧ್ವನಿಯ ವರ್ಣ ಶೋಭಿತದಲಂಕಾರದ ಸುಲಕ್ಷಣದ ಲಾಲಿತ [2]ಶ್ರುತಿರಂಜನದ ವಿಶೇಷಾರ್ಥ [3]ಸಂಚಿತದ ವಿಸ್ತಾರದಿಂ ಪೊಸತೆನಿಸುವ ಸುಪ್ರ ಬಂಧ.' ಆದುದರಿಂದ ಅದನ್ನು 'ಕೆನೆವಾಲ ಕಡೆದು [4]ನವನೀತಮಂ ತೆಗೆದು ಬಾಯ್ಗಿನಿದಾಗಿ ಸವಿಯುವಂತೆ, ಸವಿಯಬೇಕೇ ವಿನಾ ವಿನೂತನಕವಿತೆಯೆಂದು ಜರೆದು' ರಸವನ್ನು ಕೆಡಿಸಬಾರದು. ಕವಿಯು ಈ ಗ್ರಂಥವನ್ನು ರಚಿಸಿರುವುದು ಜಾಣರನ್ನು ತಲೆ ದೂಗಿಸುವುದಕ್ಕೆ ; ವಿದ್ವತ್ಸಭಾವಲಯವು ಅರಿಯುವುದಕ್ಕೆ ;

[1] ಸರೋವರ. [2] ಕಿವಿಗಿಂಪಾದ. [3] ಕೂಡಿರುವ. [4] ಬೆಣ್ಣೆ.

ಸುಜನರು ಕೇಳುವುದಕ್ಕೆ; ಇದನ್ನು ಸಂಗೀತಕಲಾನಿಪುಣನಾದ [1]ಗೀರ್ವಾಣಪುರನಿಲಯ ಲಕ್ಷ್ಮೀರಮಣನು ಸರಸೋಕ್ತಿಯಿಂದ, ವೀಣೆಯಿಂದ ಗಾನವನ್ನು ನುಡಿಸುವಂತೆ ಲೋಕವಾಣಿಯಿಂದ ಕವಿತೆ ಹೇಳಿಸಿದ್ದಾನೆ. ಆದುದರಿಂದ ಇದು ಭುವನದ ಸಕಲ ಸುಜನರಿಗೆ ಸುಶ್ರಾವ್ಯವಾಗಿದೆ; ಭಾವುಕರ [2]ಕಿವಿದೊಡವಿಗೊದಗಿದ [3]ಹಿರಣ್ಯವಾಗಿದೆ. ಕಿವಿಗಿಂಪಾಗಿ ಚರಿಸುವ ಈ [4]ಷಟ್ಪದವನ್ನು ಜಾಣರರಿದು ಮತ್ಸರವನುಳಿದಾಲಿಸಬೇಕು.

ಎಂದಮೇಲೆ ಕಾವ್ಯರಚನೆಯಲ್ಲಿ ಕವಿಗಿರುವ ಸ್ವಾತಂತ್ರ್ಯವೂ ಗುರಿಯೂ ವಿಶದವಾಗುವುದು. ಅವನು ಯಾವ ವಿಧವಾದ ಸ್ವಾತಂತ್ರ್ಯವನ್ನೂ ವಹಿಸಲು ಸಿದ್ಧನಾಗಿಲ್ಲ. ನಾದಲೋಲತೆಯೇ ಅವನ ಮುಖ್ಯ ಗುಣ. ತಾಳಲಯಗಳಿಗನುಗುಣವಾಗಿ ವರಯತಿಗೆ ಭಂಗತಾರದಿರುವ ಚದುರಗತಿಯಿಂದ ಕೂಡಿದ ನಾದಮಯವಾದ ಶಬ್ದಪ್ರಪಂಚವು ಅವನಿಗೆ ಮುಖ್ಯ. ಅರ್ಥವು ಅವನಿಗೆ ಸಹಾಯ ಮಾತ್ರ. ನವನೀತವನ್ನು ಕಡೆದು ಸವಿಯುವಂತೆ ಜಾಣರು ಅರ್ಥವನ್ನು ಹುಡುಕಿ ಕಂಡುಕೊಳ್ಳಬೇಕು. ಆದರೆ ಅವನ ನಾದಮಾಧುರ್ಯವನ್ನು ಕೇಳಿ ಸಂತೋಷಪಡುವುದಕ್ಕೆ ವಾಚಕರಿಗೆ ಯೋಗ್ಯವಾದ ಕಿವಿ ಬೇಕು.

ಲಕ್ಷ್ಮೀಶನ ಶೈಲಿಯು ಮೇಲೆ ವರ್ಣಿಸಿರುವ ಮನೋಭಾವಕ್ಕನುಗುಣವಾಗಿ ಪ್ರೌಢವಾಗಿದೆ; ಬಿಗಿಯಾಗಿದೆ; ಸಂಸ್ಕೃತ ಶಬ್ದಮಯವಾಗಿದೆ. ಆದರೆ ತನ್ನ ಉದ್ದೇಶಸಾಧನೆಯ ಪ್ರಯತ್ನದಲ್ಲಿ ಕವಿಯು ಕಾವ್ಯವನ್ನು ಕೃತಕವಾಗಿ ಮಾಡಿದ್ದಾನೆ. ಪಾಂಡಿತ್ಯಪ್ರದರ್ಶನಕ್ಕೆ ಹೊರಟಿದ್ದಾನೆ. ಚಿತ್ರಕವಿತೆಗಳಲ್ಲಿ ತೊಡಗಿದ್ದಾನೆ. ಇದರಿಂದ ಕಾವ್ಯದಾನಂದವು ಲಭಿಸುವು

[1] ದೇವನೂರು. [2] ಕಿವಿಗೆ ಧರಿಸುವ ಆಭರಣ. [3] ಚಿನ್ನ.
[4] ಷಟ್ಪದಿ, ದುಂಬಿ.

ದಕ್ಕೆ ಬದಲು ಬೇಸರವುಂಟಾಗುತ್ತದೆ. ಆದರೂ ಸ್ವಭಾವವಾಗಿ ಬರೆದ ಸಂದರ್ಭಗಳಲ್ಲಿ ಅವನ ಪದಘಟನೆಯೂ ಶಬ್ದಮೈತ್ರಿಯೂ ಶ್ಲಾಘ್ಯವಾಗಿದೆ.

ಕವಿಯ ಹೃದಯದಲ್ಲಿರುವ ಭಾವನೆಗಳನ್ನು ವಾಚಕರಿಗೆ ತಿಳಿಸುವುದಕ್ಕೆ ಶಬ್ದವೇ ಸಾಮಗ್ರಿ. ಅದು ಉತ್ತಮವಾದಷ್ಟೂ ಕವಿಯ ಪರಿಚಯವು ಚೆನ್ನಾಗಿ ಆಗುವುದು. ಅದರಲ್ಲಿಯೂ ಅವನ ಕಲ್ಪನಾಶಕ್ತಿಯೂ ಶ್ರೇಷ್ಠವಾಗಿದ್ದಪಕ್ಷದಲ್ಲಿ ಅವನು ಯಾವ ವಿಷಯವನ್ನಾದರೂ ಪ್ರತ್ಯಕ್ಷವಾಗಿ ನಡೆಯುವಂತೆ ವರ್ಣಿಸಬಹುದು. ಆಗ ಅವನ ವರ್ಣನೆಗಳೆಲ್ಲ ಮಸಕುಮಸಕಾಗಿರದೆ ಕಣ್ಣುಮುಂದೆ ಸುಳಿದಂತೆ ಭಾಸವಾಗಿ ವಾಚಕನಿಗೆ ಕಾವ್ಯದಿಂದುಂಟಾಗಬೇಕಾದಪೂರ್ಣಪ್ರಯೋಜನವಾಗುವುದು. ಅಲ್ಲದೆ ಕವಿಯೂ ಒಬ್ಬ ಚಿತ್ರಗಾರ. ಈತನಿಗೆ ಚಿತ್ರದ ಸೂಕ್ಷ್ಮ ವಿವರಗಳ ಪರಿಚಯವು ಹೆಚ್ಚಿದಷ್ಟೂ ಚಿತ್ರಗಳ ಸಮೂಹ ಸೌಂದರ್ಯವು ಹೆಚ್ಚುವುದು. ಈ ತತ್ತ್ವಗಳು ಲಕ್ಷ್ಮೀಶನಲ್ಲಿ ಸಾರ್ಥಕ್ಯವನ್ನು ಪಡೆದಿವೆ. ಅವನಿಗೆ ಶಬ್ದರಾಜ್ಯದ ಮೇಲಿರುವ ಅಧಿಕಾರವು ಅಗಾಧವಾದುದು. ಅವನ ಲೋಕಾನುಭವವು ವಿಶಾಲವಾದುದು. ಇವುಗಳನ್ನು ನೋಡಬೇಕಾದುದು ಅವನು ಮೂಲವನ್ನು ಅನುವಾದಮಾಡಿರುವ ಭಾಗಗಳಲ್ಲಲ್ಲ. ಮೂಲವನ್ನು ಬಿಟ್ಟು ಸ್ವತಂತ್ರವಾಗಿ ಮಾಡಿರುವ ಸೂರ್ಯೋದಯಾಸ್ತಮಯಗಳ, ಕಾಲಸಂಧಿಗಳ, ಋತುಧರ್ಮಗಳ, ಶೋಕಕ್ರೋಧ ಮೋಹಾದಿಗಳ ವರ್ಣನೆಯಲ್ಲಿ; ಅವು ಹೃದಯಂಗಮವಾಗಿಯೂ, ರಸವತ್ತಾಗಿಯೂ ಇವೆ. ಅವುಗಳ ಸೂಕ್ಷ್ಮ ವಿವರವು ವಾಚಕರಿಗೆ ಮಂದಟ್ಟಾಗುವಂತಿದೆ. ಮುಂದಿನ ಪದ್ಯಗಳಲ್ಲಿ ಕವಿಯು ಬೈಗುಗೆಂಪನ್ನೂ ಸಂಜೆದಾರೆಗಳನ್ನೂ ನಾನಾ ರೀತಿಯಾಗಿ ಉತ್ಪ್ರೇಕ್ಷಿಸಿದ್ದಾನೆ:—

ರಂಜಿಸುವ ಪಶ್ಚಿಮಾಚಲ[1]ಕಿರಾತಂ ತೊಟ್ಟ
[2]ಗುಂಜಾಭರಣಮೊ ಮೇಣ್ ಗಗನಾಂಬುಧಿಯ ತಡಿಯ
ಮಂಜು[3]ವಿದ್ರುಮಲತೆಯೋ ಬಗೆ[4]ಗಪರದಿಗ್ವಧುವಿನಂಗಕುಂಕುಮ
ಲೇಪಮೋ ||

[5]ಅಂಜನೇಭದ ಸಿಂಧುರಮೊ ಶಿವನ ಮಸ್ತಕದ
ಕೆಂಜಡೆಯೊ ವಿಷ್ಣುಪದ[6]ಪಂಕರುಹದರುಣತೆಯೊ
ಸಂಜೆವೆಣ್ಣುಟ್ಟ [7]ರಕ್ತಾಂಬರಮೊ ಪೇಳನಲ್ಕಾ [8]ಬೈಗುಗೆಂಪೆಸೆದುದು ||

ಬಿಚ್ಚು [9]ವೆಣೆವಕ್ಕಿಗಳ ಹೃದಯಮಂ ಬೇಯಿಸುವ
ಪೊಚ್ಚಪೊಸಕೆಂಡಂಗಳೆನೆ ಲೋಕಮಂ ನುಂಗ
ಲಿಚ್ಚೈಯಿಸಿ ಬಪ್ಪ ಕತ್ತಲೆಯೆಂಬ ಕಾಳರಕ್ಕಸಿ ಕೋಪದಿಂದುಗುಳ್ದ |
ಕಿಚ್ಚಿನ ಕೆದರ್ಗಿಡಿಗಳೆನೆ ತನ್ನ ಬಾಳುವೆಗೆ
ನಚ್ಚಿನವಳೀ ರಾತ್ರಿವಧುವೆಂದು [10]ಹಿಮಕರಂ
ಮೆಚ್ಚಿ ಮುಂಗಳುಪಿದೆಳಮಾಣಿಕಗಳೆಂಬಂತೆ ಸಂಜೆ[11]ದಾರೆಗಳೆಸೆದುವು ||

ಬಭ್ರುವಾಹನನ ಕವಲಂಬಿನಿಂದ ಕತ್ತರಿಸಲ್ಪಟ್ಟು ನಭಕ್ಕೆ ಹಾರಿ ಮುಕುಂದಸ್ಮರಣೆಮಾಡುತ್ತ ಪಾರ್ಥನ ಸಮೀಪದಲ್ಲಿ ಬಿದ್ದ ವೃಷಕೇತುವಿನ ತಲೆಯ ವರ್ಣನೆಯು ಸೌಮ್ಯಭಯಂಕರವಾಗಿದೆ.

ಬಿಟ್ಟ ಕಂಗಳ್ ಬಿಗಿದ ಪುರ್ಬುಗಳ್ [12]ಪೆರೆನೊಸಲ
ಬೊಟ್ಟುಸೂಸಿದ ಕುರುಳ್ ಥಳಥಳಿಪ ಕುಂಡಲಂ
[13]ಪುಟ್ಟುದುಪ್ಪುಳ್ಮೀಸೆ ಪೊಳೆವಲ್ಲು ನಗುಮೊಗಂ ಕಳಕಳಿಸೆ ಕಳೆಯದಿಂದ |
ಕಟ್ಟುಗ್ರಮಾಗಿರ್ದ ತನಿವೀರರಸದೊಂದು
ಗಟ್ಟಿಯೆನೆ ತೋರ್ಪ ಕರ್ಣಜನ ತಲೆಯಂ ನರಂ
ನಿಟ್ಟಿಸುತೆ ಪಣೆಯಂ ಪಣೆಯೊಳಿಟ್ಟು ಪೊಸೆದು ಚುಂಬಿಸಿ ಕಂಬನಿಯೊಳಾ
ಳ್ದನು ||

---

[1] ಬೇಡ. [2] ಗುಲಗಂಜಿಯಿಂದ ಮಾಡಿದ ಒಡವೆ. [3] ಮನೋಹರವಾದ ಹವಳದ ಕುಡಿ. [4] ಪಶ್ಚಿಮದಿಕ್ಕೆಂಬ ಹೆಂಗಸು. [5] ದಿಗ್ಗಜಗಳಲ್ಲಿ ಒಂದು (ಪಶ್ಚಿಮದಿಕ್ಕಿನಲ್ಲಿರುವ ಆನೆ). [6] ಕಮಲದ ಕೆಂಪುಬಣ್ಣ. [7] ಕೆಂಪುಬಟ್ಟೆ. [8] ಸಾಯಂಕಾಲ. [9] ಚಕ್ರವಾಕಪಕ್ಷಿ. [10] ಚಂದ್ರ. [11] ನಕ್ಷತ್ರ. [12] ಚಂದ್ರನಂತಿರುವ ಹಣೆ. [13] ಚಿಗುರುಮೀಸೆ.

ಕುಳಿಂದಕನ ಮನೆಯಲ್ಲಿ ಚಂದ್ರಹಾಸನನ್ನು ನೋಡಿ ದುಷ್ಟಬುದ್ಧಿಯು ತನ್ನ ದುರುದ್ದೇಶವನ್ನು ಪ್ರಕಟಿಸಿದ ಹರ್ಷಲಾಂಛನದಿಂದ ನಸನಗುತ ನುಡಿದ ಮಾತು ಹೀಗಿತ್ತಂತೆ:—

[1]ವ್ಯಾಳದಂಗದ ನಯವೋ [2]ಗರ್ತಸಂಛಾದಿತ ತೃ
ಣಾಳಿಗಳೊ [3]ಮಕರದಿಕ್ಕೆಯ ಮಡುವಿನಂಬುಜವೊ
[4]ಬಾಳಧಾರೆಗೆ ಲೇಪಿಸಿದ ಮಧುವೊ ಕಮಲಾಂಬಕಿಯರ ಕೃತಕದ
[5]ಬೇಟವೋ ||
ಕಾಳಕೂಟಂ ಬೆರಸಿದಮೃತಾನ್ನ ಭೋಜನವೊ
ಪೇಳಲರಿದೆನೆ ಸೊಗಸಿತು . . . ||

ಲಕ್ಷ್ಮೀಶನ ಪ್ರಕೃತಿವರ್ಣನೆಗಿಂತ ಮಾನವಪ್ರಪಂಚ ವರ್ಣನೆಯು ಹೆಚ್ಚು ಹಿತಕರವಾಗಿದೆ: ಸರಳವಾಗಿದೆ. ಅದನ್ನು ಅವನು ಪ್ರತ್ಯಕ್ಷ ನೋಡಿದ್ದಾನೆ. ಪ್ರಕೃತಿವರ್ಣನೆಯಲ್ಲಿ ಕೆಲವೆಡೆ ತೋರುವ ಕೃತಕತೆ ಇದರಲ್ಲಿಲ್ಲ. ವಾಲ್ಮೀಕಿ ಋಷಿಯ ಆಶ್ರಮದಲ್ಲಿ ಲವಕುಶರು ವಾಲ್ಮೀಕಿ ಮುನಿವರನಿಗೂ ಜಾನಕಿಗೂ ಲೀಲೆಯನ್ನು ತೋರಿದ ಪರಿಯಿದು—

ತೊಟ್ಟಿಲೊಳ್ ನಲಿವ ನೆವವಿಲ್ಲದೆ ನಗುವ ಬಾಯ್ಗೆ
ಬೆಟ್ಟಕ್ಕಿಪೀರ್ವ ಪಸಿದೊಡೆ ಚೀರ್ವ ಮೊಲೆಯುಂಬ
ಪಟ್ಟರಿಸೆ ಪೊರಳ್ವಂಬೆಗಾಲಿಡುವ ಮೊಳೆವಲ್ಲ ಜೊಲ್ಲುಗೆ ತೊದಳಿಸಿ ನುಡಿವ|
ದಟ್ಟಡಿಯಿಡುವ ನಿಲ್ವ ತೊಡರ್ವ ಬೇಡುವ ಪರಿವ
[6]ಬಟ್ಟೆಯೊಳಿರಗುವ ಕಾಡುವ ಕುಣಿವ ಲೀಲೆಯಂ
ನೆಟ್ಟನೆ ಕುಮಾರಕರ್ ತೋರಿದರ್ . . . ||

ಇವೆಲ್ಲಕ್ಕಿಂತಲೂ ಲಕ್ಷ್ಮೀಶನ ಪ್ರತಿಭೆಯನ್ನೂ ವರ್ಣನಾ ಚಾತುರ್ಯವನ್ನೂ ಕಥನಕೌಶಲವನ್ನೂ ಪ್ರಕಾಶಪಡಿಸುವುವು

---

1 ಹಾವು. 2 ದೊಡ್ಡ ಹಳ್ಳವನ್ನು ಮುಚ್ಚಿರುವ. 3 ಮೊಸಳೆಗೆ ವಾಸಸ್ಥಳವಾದ. 4 ಕತ್ತಿಯ ಅಲಗು. 5 ಪ್ರೇಮ. 6 ದಾರಿ.

ಸೀತಾಪರಿತ್ಯಾಗ ಮತ್ತು ಚಂದ್ರಹಾಸನ ಬಾಲ್ಯವನ್ನು ಕುರಿತ ಎರಡು ಭಾಗಗಳು. ಎರಡೂ ಕರುಣರಸಭರಿತವಾದುವು. ಜೈಮಿನಿಭಾರತದ ಉತ್ತಮಭಾಗಗಳು. ಅವುಗಳ ಪ್ರತ್ಯಕ್ಷಾನುಭವವು ವಾಚಕರಿಗಾಗಲೆಂದು ಆ ಎರಡು ಭಾಗಗಳನ್ನೂ ಮುಂದೆ ಸಂಗ್ರಹಿಸಿದೆ.

---

## ಸೀತಾವನವಾಸ

ಇಕ್ಷ್ವಾಕುಕುಲಸಂಭವನಾದ ರಾಮನು ರಾವಣಾದಿ ರಾಕ್ಷಸರನ್ನು ಸಂಹರಿಸಿ ವನವಾಸವನ್ನು ಮುಗಿಸಿಕೊಂಡು ಅಯೋಧ್ಯೆಗೆ ಹಿಂತಿರುಗಿ ಪಟ್ಟಾಭಿಷಿಕ್ತನಾಗಿ ಸೀತಾದೇವಿಯೊಡನೆ ರಾಜ್ಯಭಾರಮಾಡುತ್ತಿರುವನು. ಸಕಲ ಸಂಪತ್ತುಗಳಿಂದ ಕೂಡಿ ಸುಖಸಾಗರದಲ್ಲಿ ಓಲಾಡುತ್ತಿದ್ದರೂ ಕುಲವರ್ಧಕನಾದ ಪುತ್ರನಿಲ್ಲದಿರುವುದು ಆ ದಂಪತಿಗಳ ಚಿಂತೆಗೆ ಕಾರಣವಾಗುವುದು. ಆದರೆ ಅದೃಷ್ಟವಶಾತ್ ಕೆಲವು ಕಾಲದಲ್ಲಿ ಸೀತಾದೇವಿಯು ಗರ್ಭವನ್ನು ತಾಳಿ ರಾಮನಿಗೆ ಸಂತೋಷವನ್ನುಂಟುಮಾಡುವಳು. ಈ ಮಧ್ಯೆ ರಾಮನು ಸೀತಾದೇವಿಯ ವಿಷಯದಲ್ಲುಂಟಾದ ಲೋಕಾಪವಾದವನ್ನು ಪರಿಹರಿಸುವುದಕ್ಕಾಗಿ ಋಷಿಪತ್ನಿಯರ ದರ್ಶನದ ನೆವದಿಂದ ಅವಳನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ಲಕ್ಷ್ಮಣನಿಗೆ ಆಜ್ಞೆಮಾಡುವನು. ಅಣ್ಣನಾಜ್ಞೆಯನ್ನು ಮೀರಲಾರದೆ ಲಕ್ಷ್ಮಣನು ನಿಜವನ್ನರಿಯದ ಪೂರ್ಣಗರ್ಭಿಣಿಯಾದ ಸೀತಾದೇವಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಗಂಗಾನದಿಯ ಸಮೀಪಕ್ಕೆ ಕರೆದುತರುವನು. ಅಲ್ಲಿಂದ ಮುಂದಿನ ಕಥಾಭಾಗವಿದು :—

ಇಳಿದು ರಥದಿಂದ [1]ಮಂದಾಕಿನಿಗೆ ಪೊಡಮಟ್ಟು
ಬಳಿಕ ನಾವಿಕರೊಡನೆ ನಾವದೊಳ್ ಗಂಗೆಯಂ
ಕಳೆದು ನಿರ್ಮಲತೀರ್ಥದೊಳ್ ಮಿಂದು ಸೌಮಿತ್ರಿ ಮತ್ತೆ ಭೂಜಾತೆಸಹಿತ|
ಒಳಗೊಳಗೆ ಮರುಗಿ ಬಿಸುಸುಯ್ದು ಚಿಂತಿಸುತ ಮುಂ
ದಳದುಗ್ರ ಮೃಗ ಪಕ್ಷಿಗಣದಿಂದ [2]ಘೂರ್ಣಿಸುವ
[3]ಹಳುವಮಂ ಪೊಕ್ಕ ನಡಿಯಿಡುವೊಡ[4]ಸದಳಮೆಂಬ [5]ಕರ್ಕಶದ ಮಾರ್ಗದಿಂದ||

ಅಟವಿಯ ಮಹಾಘೋರ[6]ಗಹ್ವರಂ ಮುಂದೆ ದು
ರ್ಘಟಮಾಗೆ ನಡುನಡುಗಿ ಭೀತಿಯಿಂ ಸೀತೆ ಸಂ
ಕಟದಿಂದ ರಾಮನಾಮಂಗಳಂ ಜಪಿಸುತಲೆ ಸೌಮಿತ್ರಿ ಕಾನನಮಿದು|
[7]ಅಟನಕಸದಳಮಪ್ಪುದಿಲ್ಲಿ ಪುಣ್ಯಾಶ್ರಮದ
[8]ಜಟಿಗಳಂ [9]ವಲ್ಕಲವನುಟ್ಟ ಮುನಿವಧುಗಳಂ
ವಟುಗಳಂ [10]ಶ್ರುತಿಘೋಷ ಹೋಮಧೂಮಂಗಳಂ ಕಾಣೆನಂ
[11]ದಳವಳಿದಳು||

ಪಾವನಕೆ ಪಾವನಂ ಮಂಗಳಕೆ ಮಂಗಳಮ
ದಾವನ ಚರಿತ್ರನಾಮಂಗಳಾ ರಾಘವಂ
ಜೀವನದೊಡೆಯನಾಗಿರಲ್ಕಾತನಂಘ್ರಿಯನಗಲ್ದು ನಾಂ ಬಂದ ಬಳಿಕ|
ಈ ವನದೊಳಿನ್ನು ಪುಣ್ಯಾಶ್ರಮಂ ಗೋಚರಿಪು
ದೇ [12]ವನಜದಲರನುಳಿ[13]ದಾರಡಿಗೆ ಬೊಬ್ಬುಳಿಯ
ಪೂವಿನೊಳ್ ಮಧುವುಂಟೆ ಸೌಮಿತ್ರಿ ಹೇಳೆಂದು ಸೀತೆ [14]ಹೊದಕುಳಿ
ಗೊಂಡಳು|

ಉಕ್ಕಿದುವು ಕಂಬನಿಗಳಧರೋಷ್ಟಮದಿರಿ[15]ತಲ
ಗಿಕ್ಕಿ ತಿರುಪಿದೊಲಾಯಿತೊಡಲೊಳೆಡೆವರಿಯದುಸಿ
ರೊಕ್ಕುದುರೆ ಕಂಪಿಸಿದುದವಯವಂ ಕರಗಿತೆದೆ ಸ್ಮೈರಣೆ ಸಮತೆಗೆಟ್ಟುದು|

---

[1] ಗಂಗಾನದಿ. [2] ವಿಜೃಂಭಿಸುವ. [3] ಕಾಡು. [4] ಅಸಾಧ್ಯ. [5] ಕಠಿಣ.
[6] ದಟ್ಟವಾದ ಕಾಡು. [7] ಸಂಚಾರ. [8] ಋಷಿ. [9] ನಾರುಬಟ್ಟೆ.
[10] ವೇದದ ಧ್ವನಿ. [11] ಚಿಂತಿಸಿದಳು. [12] ಕಮಲದ ಹೂವು.
[13] ದುಂಬಿ. [14] ದುಃಖಪಟ್ಟಳು. [15] ಕತ್ತಿ.

ಸಿಕ್ಕಿದುವು ಕಂಠದೊಳ್ ಮಾತುಗಳ್ ಸೆರೆಬಿಗಿದು
ಮಿಕ್ಕು ಮೀರುವ ಶೋಕದಿಂದ ಬೆಂಡಾಗಿ [1]ಕಡು
ಗಕ್ಕಸದ ಕೆಲಸಮನುಸಿರಲರಿಯದವನೊಯ್ಯನವನಿಸುತೆಗಿಂತೆಂದನು ||

ದೇವಿ ನಿನಗಿನ್ನೆಗಂ ಪೇಳ್ದುದಿಲ್ಲಪವಾದ
ಮಾವರಿಸೆ ನಿನ್ನನೊಲ್ಲದೆ ರಘುಕುಲೋದ್ವಹಂ
[2]ಸೀವರಿಸಿ ಬಿಟ್ಟು ಕಾಂತಾರಕ್ಕೆ ಕಳುಹಿಬಾಯೆಂದೆನಗೆ ನೇಮಿಸಿದೊಡೆ |
ಆ ವಿಭುವಿನಾಜ್ಞೆಯಂ ಮೀರಲರಿಯದೆ ಮೆಲ್ಲ
ನೀ ವಿಪಿನಕೊಡಗೊಂಡು ಬಂದೆನಿನ್ನೊಯ್ಯೊಯ್ಯ
ನಾವಲ್ಲಿಗಾದೊಡಂ ಪೋಗೆಂದು ಲಕ್ಷ್ಮಣಂ [3]ಬಾಷ್ಪಲೋಚನನಾದನು ||

ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ
ಮುರಿ[4]ದಿಳೆಗೊರಗುವಂತೆ ಲಕ್ಷ್ಮಣನ ಮಾತು ಕಿವಿ
ದೆರೆಗೆ ಬೀಳದ ಮುನ್ನ ಹಮ್ಮೈಸಿ ಬಿದ್ದಳಂಗನೆ ಧರೆಗೆ ನಡನಡುಗುತ |
ಮರೆದಳಂಗೋಪಾಂಗಮಂ ಬಳಿಕ ಸೌಮಿತ್ರಿ
ಮರುಗಿ ತಣ್ಣೀರ್ದಳಿದು ಪತ್ರದಿಂ ಕೊಡೆವಿಡಿದು
ಸೆರಗಿಂದ ಬೀಸಿ ರಾಮನ ಸೇವೆ ಸಂದುದೇ ತನಗೆಂದು ರೋದಿಸಿದನು ||

ಒಯ್ಯನರೆಗಳಿಗೆಯೊಳ್ ಕಣ್ದೆರೆದು ದೈನ್ಯದಿಂ
[5]ಸುಯ್ಯೆಲರನುರೆ ಸೂಸಿ ಸೌಮಿತ್ರಿಯಂ ನೋಡಿ
ಕೊಯ್ಯಲೊಲ್ಲದೆ ಕೊರಳನಿಂತು ತನ್ನಂ ಬಿಡಲ್ ಮಾಡಿದಪರಾಧಮುಂಟೆ |
ಕಯ್ವಾರೆ ಖಡ್ಗಮಂ ಕೊಟ್ಟು ತನ್ನರಸಿಯಂ
ಹೊಯ್ಯೆಂದು ಪೇಳದಡವಿಗೆ ಕಳುಹಿಬಾರೆಂದ
ನಯ್ಯಯ್ಯೊ ರಾಘವಂ ಕಾರುಣ್ಯನಿಧಿಯೆಂದಳಲ್ದಳಂಬುಜದಳಾಕ್ಷಿ ||

ಎಂದು ಕೌಶಿಕಮುನಿಪನೊಡನೆ ಮಿಥಿಳಾಪುರಕೆ
ಬಂದು ಹರಧನುವನುಡಿದೆನ್ನಂ ಮದುವೆಯಾದ
ನಂದು ಮೊದಲಾಗಿ ರಮಿಸಿದನೆನ್ನೊಳಾನಗಲ್ದೊಡೆ ತಾಂ ನವೆದನಲ್ಲದೆ |

---

[1] ಬಹು ಕಠಿಣವಾದ. [2] ಅಸಹ್ಯಪಟ್ಟು. [3] ಕಣ್ಣೀರು.
[4] ಭೂಮಿ. [5] ಉಸಿರಿನ ಗಾಳಿ.

[1]ಒಂದಿದನೆ ಸೌಖ್ಯಮಂ ರಾಮನೆನಗಾಗಿ ಕಪಿ
ವೃಂದಮಂ [2]ನೆರಪಿ ಕಡಲಂ ಕಟ್ಟಿ ದೈತ್ಯರಂ
ಕೊಂದಗ್ನಿಮುಖದೊಳ್ ಪರೀಕ್ಷಿಸಿದನೆನ್ನೊಳಪರಾಧಮಂ ಕಾಣಿಸಿದನೇ ||

ಕಲ್ಮುಳ್ಳಿಡಿದ ಕಾಡೊಳಂದೆನ್ನನುಪಚರಿಸಿ
ಪಲ್ಮೊರೆದು ಗರ್ಜಿಪ ವಿರಾಧನಂ ಮರ್ದಿಸಿದ
ಬಲ್ಮೆಯಿಂ ನಾಂ ಕಳುಪಿದೊಡೆ ಜನಸ್ಥಾನದಿಂ ಪೋದೆ ರಾಘವನ ಬಳಿಗೆ |
ನಲ್ಮೆಯಿಂ ಮರೆದಪನೆ ಸೌಮಿತ್ರಿ ನೀನೆಲ್ಲ
ರೊಲ್ ಮೈದುನನೆ ತನಗೆ ಕಾನನದೊಳೆನ್ನನಿರಿ
ಸಲ್ ಮನಂ ಬಂದಪುದೆ ತಂದೆ ನಿನಗೆಂದು ಕಂಬನಿವಿಡಿದಳಂಬುಜಾಕ್ಷಿ ||

ತೊಳಪ ನಾಸಿಕದ ನುಣ್ಗದಪುಗಳ ಪೊಳೆವ ಕಂ
ಗಳ ತುರುಗಿದೆವೆಯ ನಿಡುಪುರ್ಬುಗಳ [3]ಪೆರೆನೊಸಲ
ಥಳಥಳಿಪ ಮಕುಟದ ಕಿವಿಯ ಮಕರಕುಂಡಲದ ಕೋಮಲಿತ
[4]ಚುಬುಕಾಗ್ರದ ||

ಲಲಿತಾರುಣಾಧರದ ಮಿರಗುವ ರದನ ಪಂಕ್ತಿ
ಗಳ ಸೂಸುವೆಳನಗೆಯ ಮೋಹನದ ಚೆಲ್ವಿ[5]ನೊ
ಬ್ಬುಳಿಯೆನಿಪ ರಾಘವನ ಸಿರಿಮೊಗವನೆಂತು ನೋಡದೆ ಮಾಣ್ಬೆನಕಟೆಂದಳು ||

ರಾಯ ಕೇಳಿಂತಿಂತು ರಾಘವೇಶ್ವರನ ರಮ
ಣೀಯ ಗುಣಮಾಲೆಯಂ ನೆನೆನೆನೆದು ಹಂಬಲಿಸು
ತಾಯತಾಂಬಕಿ ಮತ್ತಮೈಮರೆಯುತೆಚ್ಚರುತ[6] ಪಾವಗಿದ ಪಸುಳೆಯೊಲಿರೆ |
ತಾಯೆ ನಿನ್ನಂ ಬಿಟ್ಟು ಪೋಗಲಾರೆಂ ಪೋಗ
ದೀಯವಸ್ಥೆಯೊಳಿರ್ದೊಡಣ್ಣನೇಗೆಯ್ದಪನೊ
ಹಾಯೆಂದು ಲಕ್ಷ್ಮಣಂ ಶೋಕಗದ್ಗದನಾಗೆ ಸೀತೆ ಮಗುಳಿಂತೆಂದಳು ||

ತಂದೆ ಲಕ್ಷ್ಮಣ ನಿನ್ನೊಳೆಂದೊಡಿನ್ನೇನಹುದು
ಹಿಂದಣ ಜನಸ್ಥಾನದಂದದೊಳ್ ಪೋಗು ನೀಂ
ಕೊಂದುಕೊಂಬೊಡೆ ತನ್ನ ಬೆಂದೊಡಲೊಳಿದೆ ಬಸಿರ[7]ದಂದುಗಂ ಕಾನನದೊಳು||

---

1 ಪಡೆದನೆ. 2 ಒಟ್ಟುಗೂಡಿಸಿ. 3 ಚಂದ್ರನಂತಿರುವ ಮುಖ.
4 ಗಲ್ಲ. 5 ಸಮೂಹ. 6 ಹಾವು ಕಚ್ಚಿದ ಮಗು. 7 ಕಾಟ.

ಬಂದುದಂ ಕಾಣ್ಬೆನಾನಿಂದು ಕೌಸಲೆಯಡಿಗೆ
ವಂದಿಸಿದೆನಪರಾಧಮೊಂದುಮಿಲ್ಲದೆ ತನ್ನ
ಕಂದನೆನ್ನಂ ತೊರೆದುದಂ ದೇವಿಗೊರೆವುದೆನುತಂದಳಲ್ದಳ್ ಮೃಗಾಕ್ಷಿ ||

ಏಕೆ ನಿಂದಿಹೆ ಪೋಗು ಸೌಮಿತ್ರಿ ಕೋಪಿಸನೆ
ಕಾಕುತ್ಸ್ಥನಿಲ್ಲಿ [1]ತಳುವಿದೊಡೆ ನೆರವುಂಟು ತನಗೀ
ಕಾಡೊಳುಗ್ರ ಜಂತುಗಳಲ್ಲಿ ರಘುನಾಥನೇ ಕಾಕಿಯಾಗಿರ್ಪನು |
ಲೋಕದರಸೇಗೆಯ್ದೊಡಂ ತನ್ನ ಕಿಂಕರರ್
ಬೇಕುಬೇಡೆಂದು ಪೇಳರೆ ಭರತ ಶತ್ರುಘ್ನ
ರೀ ಕೆಲಸಕೊಪ್ಪಿದರೆ ಹನುಮಂತನಿರ್ದಪನೆ ಪೇಳೆಂದಳಲ್ದಳಬಲೆ ||

ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ
ಕಡುಪಾತಕಂಗೆಯ್ದು ಪೆಣ್ಣಾಗಿ ಜನಿಸಿ ತ
ನ್ನೊಡಲಂ ಪೊರೆವುದೆನ್ನೊಳಪರಾಧಮುಂಟು ಸಾಕಿಲ್ಲಿರಲ್ಬೇಡ ನೀನು |
ನಡೆ ಪೋಗು ನಿಲ್ಲದಿರ್ ನಿನಗೆ ಮಾರ್ಗದೊಳಾಗೆ
ಲಡಿಗಡಿಗೆ ಸುಖಮೆಂದು ಸೀತೆ ಕಂಬನಿಗಳಂ
ಮಿಡಿ[2]ದಾರ್ತೆಯಾಗಿರಲ್ ಸೌಮಿತ್ರಿ ನುಡಿದನಾ ವಿಪಿನದಭಿಮಾನಿಗಳ್ಗೆ ||

ಎಲೆ ವನಸ್ಥಳಗಳಿರ ವೃಕ್ಷಂಗಳಿರ ಮೃಗಂ
ಗಳಿರ ಕ್ರಿಮಿಕೀಟಂಗಳಿರ ಪಕ್ಷಿಗಳಿರ ಲತೆ
ಗಳಿರ ತೃಣ[3]ಗುಲ್ಮಂಗಳಿರ ಪಂಚಭೂತಂಗಳಿರ ದೆಸೆಗಳಿರ ಕಾವುದು |
ಎಲೆ ಧರ್ಮದೇವತೆ ಜಗಜ್ಜನನಿ ಜಾಹ್ನವಿಯೆ
ಸಲಹಿಕೊಂಬುದು ನಿನ್ನ ಮಾತೆಯಂ ಜಾನಕಿಯ
ನೆಲೆ ತಾಯಿ ಭೂದೇವಿ ನಿನ್ನ ಮಗಳಿಹಳೆಂದು ಸೌಮಿತ್ರಿ ಕೈಮುಗಿದನು ||

ಮಾಳ್ಕೆಯಿನ್ನಾವುದಿಬ್ಬಗಿಯಾಗಿ ತನ್ನೊಡಲ
ಸೀಳ್ಕಿಡಹ ಬೇಡವೆ ಧರಿತ್ರಿಯೊಳ್ ನಿಷ್ಠುರದ
ಬಾಳ್ಕೆಯಂ ಸುಡಲೆನುತ ದೇವಿಯಂ ಬಲವಂದು ಲಕ್ಷ್ಮಣಂ ನಮಿಸಿ ಬಳಿಕ |
ಬೀಳ್ಕೊಂಡು ನಡೆಯಲ್ಕೆ ಹಿಂದುಹಿಂದಕೆ ಮನಂ
[4]ನೀಳ್ಕುಳಿಗೊಳಲ್ಕೆಂದುಮಗಲದಣ್ಣನ ಕಡೆಗೆ
ದೂಳ್ ಕಾಯದೊಳ್ ಪತ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆ
ಪೊಲಾದನು ||

---

[1] ಸಾವಕಾಶಮಾಡು. [2] ದುಃಖಿತಳು. [3] ಪೊದರು. [4] ಜೋತುಬೀಳಲು.

ತಾಯನೆಳಗರು [1]ಬಿಚ್ಚುವಂತೊಯ್ಯನೊಯ್ಯನ
ತ್ಯಾಯಾಸದಿಂದಗಲ್ದಮರ ನದಿಯಂ ದಾಂಟಿ
ದಾಯ ಕೇಳ್ ದುಃಖಾರ್ತನಾಗಿ ಸೌಮಿತ್ರಿ ಸಾಗಿದನತ್ತಲವಳಿತ್ತಲು |
ಬಾಯಾರಿ ಕಂಗೆಟ್ಟು ಲಕ್ಷ್ಮಣನ ತಲೆಮರಿಸ
ಲಾಯೆಂದೊರಲ್ದು ಭಯಶೋಕದಿಂದಸವಳಿದು
ಕಾಯಮಂ ಮರೆದವನಿಗೊರಗಿದಳ್ ಮೂಲಮಂ ಕೊಯ್ದೆಳೆಯ
ಬಳ್ಳಿಯಂತೆ ||

ಅರಸ ಕೇಳಲ್ಲಿರ್ದ ಪಕ್ಷಿಮೃಗಜಂತುಗಳ್
ಧರಣಿಸುತೆಯಂ ಬಳಸಿ ನಿಂದು [2]ಮೆಯ್ಯುಡುಗಿ ಜೋ
ಲ್ದಿರದೆ ಕಣ್ಣೀರ್ಗರೆದು ನಿಜವೈರಮಂ ಮರೆದು ಪುಲ್ಮೇವುಗಳನೆ ತೊರೆದು |
ಕೊರಗುತಿರ್ದುವು ಕೂಡೆ ವೃಕ್ಷಲತೆಗಳ್ ಬಾಡಿ
ಸೊರಗುತಿರ್ದುವು ಶೋಕಭಾರದಿಂ ಕಲ್ಮರಂ
ಕರಗುತಿರ್ದುವು ಜಗದೊಳುತ್ತಮರ ಹಾನಿಯಂ ಕಂಡು ಸೈರಿಸುವರುಂಟೆ ||

ಬೀಸಿದುವು ಬಾಲದೊಳ್ ಚಮರಿಗಳ್ ಚಮರಮಂ
ಪಾಸಿದುವು ಕರಿಗಳೆಳದಳಿರ ಮೃದು[3]ತಳ್ಪಮಂ
ಸೂಸಿದುವು [4]ಸಾರಸಂಗಳ್ ತಮ್ಮ ಗರಿಗಳಂ ತೋದು ತಂದಂಬುಗಳನು ||
ಆ ಸಿರಿಮೊಗಕ್ಕೆ ಬಿಸಿಲಾಗದಂತಾಗಸದೊ
ಳೋಸರಿಸಿದಂಚೆಗ[5]ಳಿರಂಕೆಯನಗಲ್ಚಿ ನೆಳ
ಲಾಸೆಗೆಯ್ದುವು ರಾಘವನ ರಾಣಿ ದುಃಖಸಂತಪ್ತೆಯಾಗಿರುತಿರಲ್ಕೆ ||

ಆ ಕಾಲಕ್ಕೆ ಸರಿಯಾಗಿ ಆ ಮಾರ್ಗದಲ್ಲಿಯೇ ಬರುತ್ತಿದ್ದ ವಾಲ್ಮೀಕಿಮುನಿಗಳು ಸೀತಾದೇವಿಯನ್ನು ಕಂಡು ಸಮಾಧಾನ ಪಡಿಸಿ ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋಗುವರು.

ಮೇಲಿನ ಪದ್ಯಗಳಲ್ಲಿ ಲೋಕಮಾತೆಯಾದ ಸೀತಾದೇವಿಗೆ ರಾಮನಲ್ಲಿರುವ ಪತಿಭಕ್ತಿಯೂ ಲಕ್ಷ್ಮಣನಲ್ಲಿರುವ ವಾತ್ಸಲ್ಯವೂ

---

[1] ಅಗಲು. [2] ಮೈಕುಗ್ಗಿಸಿಕೊಂಡು. [3] ಹಾಸಿಗೆ. [4] ನೀರುಹಕ್ಕಿ.
[5] ರೆಕ್ಕೆ.

ಸ್ಫುಟವಾಗಿ ವರ್ಣಿತವಾಗಿವೆ. ಲಕ್ಷ್ಮಣನು ಕರ್ತವ್ಯಗಳೆರಡರ ಮಧ್ಯೆ ಸಿಕ್ಕಿ ತೂಗುಯ್ಯಾಲೆಯ ಹಾಗೆ ಆಗಿದ್ದಾನೆ. ಅವನ ದುಃಖದ ವರ್ಣನೆಯು ಎದೆಯೊಡೆಯುವಂತಹುದಾಗಿದೆ. ಕಲ್ಮರ ಗಳು ಕರಗುವಂತೆ ಅಳುತ್ತಿರುವ ಸೀತಾದೇವಿಯ ಶೋಕವನ್ನು ನೋಡಿ ಕಾಡಿನ ಮೃಗಪಕ್ಷಿಗಳು ಸಹಾನುಭೂತಿಯಿಂದ ಅವಳಿಗೆ ಉಪಚರಿಸುತ್ತಿರುವುದು ಕರುಣೆಯಿಂದ ತುಂಬಿದೆ.

---

## ಚಂದ್ರಹಾಸನ ಬಾಲ್ಯ

ಚಂದ್ರಹಾಸನ ಬಾಲ್ಯವೂ ಇದರಂತೆಯೇ ಕರುಣರಸಭರಿತ ವಾಗಿದ್ದರೂ ಅದರ ಸ್ವರೂಪವೇ ಬೇರೆ. ಮೇಲಿನ ಸನ್ನಿವೇಶ ದಲ್ಲಿ ಕವಿಯು ಪತಿತೊರೆದ ಸಾಧ್ವೀಮಣಿಯೊಬ್ಬಳ ಕಥೆಯಿಂದ ವಾಚಕರ ಕಣ್ಣೀರನ್ನು ಸೆಳೆದಿದ್ದಾನೆ. ಮುಂದೆ ಬರುವುದು ಅನಾಥ ಬಾಲಕನೊಬ್ಬನ ಬಾಲ್ಯವೃತ್ತಾಂತ. ಅವನ ಅನ್ಯಾದೃಶ ವಾದ ಬಾಲಲೀಲೆಗಳೂ, ಅಂತಃಪುರದ ಸಾಮಾನ್ಯ ದಾದಿಯೊ ಬ್ಬಳಿಗೆ ಆತನಲ್ಲಿದ್ದ ಸಹಜ ಪ್ರೇಮವೂ ಅವನ ವಿಷಯದಲ್ಲಿ ಮಂತ್ರಿಯಾದ ದುಷ್ಟಬುದ್ಧಿಗುಂಟಾದ ಪ್ರಬಲ ದ್ವೇಷವೂ ಅಲ್ಲಿ ವಿಶದವಾಗಿ ಚಿತ್ರಿತವಾಗಿವೆ. ಅದರ ಸ್ವಾರಸ್ಯವನ್ನು ಮುಂದೆ ನೋಡಬಹುದು.

ಕೇರಳದೇಶದಲ್ಲಿ ಮೇಧಾವಿಯೆಂಬೊಬ್ಬ ದೊರೆ. ಆತನಿಗೆ ಕೆಟ್ಟ ನಕ್ಷತ್ರದಲ್ಲಿ ಭಾಗ್ಯಸಂಪನ್ನನಾದ ಮಗನೊಬ್ಬನು ಹುಟ್ಟು ವನು. ಸ್ವಲ್ಪದಿನದಲ್ಲಿಯೇ ಶತ್ರುಗಳು ಆ ದೇಶವನ್ನು ಮುತ್ತಿ ಮೇಧಾವಿಯನ್ನು ಯುದ್ಧದಲ್ಲಿ ಕೊಂದು ರಾಜ್ಯವನ್ನು ವಶಪಡಿಸಿ ಕೊಳ್ಳುವರು. ಮೇಧಾವಿಯ ಹೆಂಡತಿಯೂ ಪತಿಯೊಡನೆ ಸಹಗಮನವನ್ನಾಚರಿಸುವಳು. ಬಾಲಕನು ಅನಾಥನಾಗುವನು.

ಬಳಿಕೊರ್ವ ದಾದಿ ಶಿಶುವಂ ಕೊಂಡು [1]ಪೊರಮಟ್ಟು
ತೊಳಲಿ ಬಳಲುತ ಮೆಲ್ಲನೈತಂದು ಕುಂ
ತಳನಗರಮಂ ಪೊಕ್ಕಳಲ್ಲಿ ಸಾಕಿದ[2]ಳರ್ಭಕನನತಿಪ್ರೇಮದಿಂದ |
ಎಳೆಯಂಗೆ ಬೇಕಾದುದಿಲ್ಲದಿರೆ ಮರುಗುವಳ್
[3]ಪೊಳಲೊಳಗೆ [4]ತಿರಿದು ಹೊರೆದಳಲುವಳ್ ಮುದ್ದಿಸಿ ಪ
ಸುಳೆಯ ಬಿನದಂಗಳ್ಗೆ ಹಿಗ್ಗಿ ಬಿಸುಸುಯ್ವುಳವಳನುದಿನದೊಳಾರ್ತೆಯಾಗಿ ||

ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲ ನಿನಗೆ [5]ಪೊಂ
ದೊಡಿಗೆಯಿಲ್ಲಿರೆ ನಿಳಯವಿಲ್ಲ ಬಿಡದೆರೆವ ನೀರ್
ಕುಡಿವಾಲ್ಗಳೆಣ್ಣೆ ಬೆಣ್ಣೆಗಳಿಲ್ಲ ಲಾಲಿಸಿ ನಲಿವ ತಾಯಿತಂದೆಯಿಲ್ಲ |
ಪೊಡವಿಪತಿ ಕೇರಳಾಧೀಶ್ವರಂ ತನಯನಂ
ಪಡೆದನಿದಕೀಗ ನಿನ್ನಂ ನೋಡುವೆನ್ನ ಕ
ಣ್ಣೊಡೆಯದಕಟಕಟೆಂದು ಬಿಸುಸುಯ್ದಳಲ್ದು ಮರುಗುವಳಾಕೆ ದಿನ ದಿನದೊಳು ||

ಬಾಲಕನ ಲೀಲೆಯಂ ಕಂಡು ಹಿಗ್ಗುವಳೊಮ್ಮೆ
ಲಾಲನೆಗಳಿಲ್ಲೆಂದಳಲ್ದು ಮರುಗುವಳೊಮ್ಮೆ
ಪಾಲಿಸಿದಳಿಂತು ನಡೆನುಡಿಗಳಂ ಕಲಿವಲ್ಲಿ ಪರಿಯಂತಮಾ ಶಿಶುವನು |
ಮೇಲೆ [6]ರುಜೆ ಬಂ[7]ದಡಸಿ ವಿಧಿವಶದೊಳಾ ದಾದಿ
ಕಾಲನರಮನೆಗೈದಿದಳ್ ಬಳಿಕ ಪಸುಳೆಗೆ [8]ನಿ
ರಾಲಂಬಮಾಗಲಾ ಪಟ್ಟಣದ ಮನುಜರ್ಗೆ ಕಾರುಣ್ಯಕೆಡೆಯಾದನು ||

ಚೆಲ್ವ ಶಿಶು ಬೀದಿಯೊಳ್ ಬಂದು ದೇಸಿಗನಾಗಿ
ನಿಲ್ವನಂ ಕಂಡ ಕಂಡಬಲೆಯರ್ ಕರೆಕರೆದು
ಮೆಲ್ವ [9]ತನಿವಣ್ಗಳಂ ಕಜ್ಜಾಯ ಸಕ್ಕರೆಗಳಂ ಕೊಡುವರೆತ್ತಿಕೊಂಡು |
ಸೊಲ್ವ ಮಾತುಗಳನಾಲಿಸಿ ಮುದ್ದಿಸುವರೀವ
ರೊಲ್ವುದಂ ಮಜ್ಜನಂಗೆಯ್ಸಿ ಮಡಿಯಂ ಪೊದಿಸಿ
ಮೆಲ್ಪಾಸಿನೊಳ್ ಮಲಗಿಸುವರರ್ಥಿಯಿಂದೊಸೆದು ತಂತಮ್ಮ ಮಕ್ಕಳೊಡನೆ ||

1 ಹೊರಟು. 2 ಮಗು. 3 ಪಟ್ಟಣ. 4 ಯಾಚಿಸಿ. 5 ಚಿನ್ನದ ಆಭರಣ. 6 ರೋಗ. 7 ಆವರಿಸಿ. 8 ಆಶ್ರಯವಿಲ್ಲದಿರುವಿಕೆ. 9 ಕಳಿತ ಹಣ್ಣು.

[1]ಪರಪುಟ್ಟನಾಗಿ ಪಟ್ಟಣದ ಬೀದಿಗಳೊಳಗೆ
ತಿರುಗುತಿಹ ಬಾಲಕನ ರೂಪಮಂ ಕಂಡು ಕರೆ
ಕರೆದು ಭವನಂಗಳ್ಗೆ ಕೊಂಡೊಯ್ದು ಗಣಿಕೆಯರ್ ತಮತಮಗೆ ಮೋಹದಿಂದ|
ಸರಸ ಪರಿಮಳ ಸುಗಂಧಗಳಂ [2]ತಿಗುರಿ ಕ
ಸ್ತುರಿಯ ತಿಲಕವನಿಟ್ಟು [3]ಕಮ್ಮಲರ್ ಮುಡಿಸಿ ಕ
ರ್ಪುರ ವೀಳೆಯಂಗೊಟ್ಟು ಮಡಿ ತೊಡಂಗಳೊಳ್ಮೆದೆ ಸಿಂಗರಿಸಿ ಕಳುಹುತಿಹರು||

ಆಡುವೆಳಮಕ್ಕಳೊಡನಾಡುವಂ ಲೀಲೆ ವಿಗೆ
ನೋಡುವಚ್ಚರಿಗಳಂ ನೋಡುವಂ ಬಾಲಕರ
ಕೂಡೆ ಮನೆಮನೆಗಳೊಳ್ ಕಾಡದಿಹನೆಲ್ಲರ್ಗೆ ಮುದ್ದಾಗಿ ಮೋಹಿಸುವನು|
ಪಾಡುವರ ನೋಡುವರ ನಾಡೆ ಸಾಧನೆಗಳಂ
ಮಾಪುವರನರ್ಥಿಯಿಂ ಬೇಡುವರ ನೆರವಿಯೊಳ್
ಕ್ರೀಡಿಸುವನಾ ಪುರದ ರೂಢಿಸಿದ ಬೀದಿಯೊಳ್ ಪಸುಳೆ ಪರಪುಟ್ಟನಾಗಿ||

ಹೀಗೆ ಆ ಮಗುವಿಗೆ ಅಯ್ದು ವರ್ಷ ತುಂಬಿತು. ಒಂದು ದಿನ ಕುಂತಳೇಂದ್ರನ ಮಂತ್ರಿಯಾದ ದುಷ್ಟಬುದ್ಧಿಯ ಮನೆಯಲ್ಲಿ ಭೋಜನವಾಗುತ್ತಿರುವಾಗ ಬ್ರಾಹ್ಮಣರು ಆ ಬಾಲಕನ ರಾಜಲಕ್ಷಣಗಳನ್ನು ನೋಡಿ ಅವನು ಮುಂದೆ ಕುಂತಳನಗರದ ಅರಸನಾಗುವನೆಂದು ಭವಿಷ್ಯವನ್ನು ನುಡಿದರು. ರಾಜನಿಗೆ ಮಕ್ಕಳಿಲ್ಲದುದರಿಂದ ಮುಂದೆ ತನ್ನ ಮಕ್ಕಳಿಗೆ ರಾಜ್ಯವು ಸಿಕ್ಕುವುದೆಂದಿದ್ದ ದುಷ್ಟಬುದ್ಧಿಗೆ ಈ ಮಾತನ್ನು ಕೇಳಿದೊಡನೆಯೆ ಚಿಂತೆಯುಂಟಾಗಿ

ಕ್ರೂರ[4]ನಕ್ರಾಕುಲದೊಳಿಡಿದಿರ್ದ ಪೆರ್ಮಡು ಗ
ಭೀರ ನಿರ್ಮಲಜಲದೊಳೆಸೆವಂತೆ ಮನದೊಳ್ ಕ
ಠೋರತರ ಬಾವಮಂ ತಳೆದು ಬಹಿರಂಗದೊಳ್ ವಿನಯಮುಳ್ಳಾತನಾಗಿ|

---

[1] ಇತರರಿಂದ ಪೋಷಿತನಾದವನು. [2] ಲೇಪನ ಮಾಡಿ. [3] ಸುವಾಸನೆಯಿಂದ ಕೂಡದ ಹೂವು. [4] ಮೊಸಳೆಗಳ ಗುಂಪಿನಿಂದ ತುಂಬಿರುವ.

ಚಾರುಲಕ್ಷಣದ ಶಿಶುವಂ ನೋಡಿ [1]ಧರೆಯ ವೃಂ
ದಾರಕರ ನುಡಿಗೊಪ್ಪಿದವ್ರೊಲಿರ್ದು ಬಳಿಕ ಸ
ತ್ಕಾರದಿಂದಾ ವಿಪ್ರರಂ ಕಳುಹಿದಂ ದುಷ್ಟಬುದ್ಧಿ ನಿಜಭವನದಿಂದ ||

ಈ ಕುಂತಳೇಂದ್ರಂಗೆ ಸುತರಿಲ್ಲ ರಾಜ್ಯಮೆನ
ಗೇಕಾಧಿಪತ್ಯಮಾಗಿರ್ದಪುದು ಮುಂದಿವಂ
ಭೂಕಾಂತನಾದಪಂ ಗಡ ವಿಪ್ರರೆಂದ ನುಡಿ ತಪ್ಪದೆನ್ನಾತ್ಮಜರ್ಗೆ |
ಬೇಕಾದ ಸಂಪದಂ ಬಯಲಾಗಿ ಪೋಪುದೆಂ
ದಾ ಕುಮತಿ ಬೇರೊಂದುಪಾಯಮಂ ಚಿಂತಿಸಿ ಭ
ಯಾಕಾರದೊಡಲ ಚಂಡಾಲರಂ ಕರಸಿ ಬೆಸಸಿದನಾರುಮರಿಯದಂತೆ ||

ಕಾನನಾಂತರದೊಳೀ ತರಳನಂ ಕೊಂದು ನೀ
ವೇನಾದೊಡಂ ಕುರುಪ ತಂದೆನಗೆ ತೋರ್ಪುದೆಂ
ದಾ ನರೇಂದ್ರನ ಮಂತ್ರಿ ಬೆಸಸಿದೊಡೆ ಪಶುಘಾತಕಿಗಳಾಡುತಿಹ ಶಿಶುವನು |
ಹೀನ ದಯದಿಂದ ಪಿಡಿದೆತ್ತಿ ಕೊಂಡೊಯ್ದರ್ ಭ
ಯಾನಕದೊಳಂದು ಕೊಲೆಗೆಳಸಿ ಪ್ರಹ್ಲಾದನಂ
ದಾನವೇಶ್ವರನಾಜ್ಞೆಯಿಂ ಕಾಳರಕ್ಕಸರ್ ಬಂದು ಕೈದುಡುಕಿದಂತೆ ||

ಘಾತಕಿಗಳೊಡಲೊಳಿಹ ಪರಮಾತ್ಮನಂತೆ ಯಮ
ದೂತರೆಳೆತಂದಜಾಮಿಳನಂತೆ ಶಾಕಸಂ
ಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮರಿಯಂತೆ ನಲುಗಿ ಕತ್ತಲೆಯೊಳಿರ್ದ |
[2]ಶೀತಳಮರೀಚಿಲಾಂಛನದಂತೆ ಬಹಳ ಕೋ
ಪಾತಿಶಯದೊಳಗಿಹ ವಿವೇಕದಂತಾಗ ಪಶು
ಘಾತಕಿಗಳೆತ್ತಿಕೊಂಡೊಯ್ವ ಬಾಲಕನಿರ್ದನವರೆಡೆಯೊಳಂಜುತಳುತ ||

ಒಯ್ದು ಪಸುಳೆಯನರಣ್ಯದೊಳಿರಿಸಿ ಮರುಗಿ ಬಿಸು
ಸುಯ್ದು ಪಶುಘಾತಕಿಗಳಾ ದುಷ್ಟಬುದ್ಧಿಯಂ
ಬಯ್ದು ಶಿಶುವಧೆಗಳುಕಿ ನಿಂದು ನೋಡುತ ಕಂಡರರ್ಭಕನೆಡದ ಕಾಲೊಳು |

---

[1] ಬ್ರಾಹ್ಮಣರು. [2] ಚಂದ್ರ.

ಅಯ್ದಲ್ಲದೊಂದು ಬೆರಳಿರ್ಪುದಂ ಬಳಿಕದಂ
ಕೊಯ್ದು ಕುರುಪಂ ಕೊಂಡು ತಮ್ಮ ದಾತಾರನೆಡೆ
ಗೆಯ್ದಿ ತೋರಿದೊಡವನವರ್ಗಳಂ ಮನ್ನಿಸಿ ಮಹೋತ್ಸವದೊಳಿರೆ,
ಕಾಡೊಳು ||

ಬಸಿವ [1]ನೆತ್ತರಗಾಯದೆಡದಡಿಯ ವೇದನೆಗೆ
ಪಸುಳೆ ಹರಿಹರಿಯೆಂದೊರಲ್ದಳುತಿರಲ್ ಕಣ್ಣೊ
[2]ಳೊಸರ್ವ ಬಾಷ್ಪಂಗಳಂ ಕಂಡು [3]ಮಿಗವಕ್ಕಿಗಳ್ ನೊಂದು ಕಡು
ಶೋಕದಿಂದ |

ಪಸಿವು ನೀರಡಿಕೆಯಂ ತೊರೆದಲ್ಲಿ ನಿಂದುಪತ
ರಿಸುತಿರ್ದುವಾ ಶಿಶುವನೆಂದೊಡೆಲೆ ಪಾರ್ಥ ಕೇಳ್
ವಸುಮತಿಯೊಳಾರ್ತರಂ ನೋಡಿ ಮಿಗೆ ಮರುಗದಿಹ ಮಾನವಂ ಪಾಪಿಯಲ್ತೆ ||

ಆ ವೇಳೆಗೆ ಸರಿಯಾಗಿ ಅಲ್ಲಿಯೇ ಬೇಟೆಯಾಡುತ್ತಿದ್ದ ಆ ಕಾಡಿನ ಯಜಮಾನನಾದ ಕುಳಿಂದಕನೆಂಬ ದೊರೆಯು ಜಿಂಕೆ ಯೊಂದನ್ನು ಬೆನ್ನಟ್ಟಿ ಬರುವನು. ಪಕ್ಕದಲ್ಲಿಯೇ ಹರಿಯನಾಮ ವನ್ನು ಜಪಿಸುತ್ತ ಅಳುತ್ತಿದ್ದ ಬಾಲಕನ ಧ್ವನಿಯು ಕೇಳಿ ಬರು ವುದು. ಕೂಡಲೆ ಅವನು ಕುದುರೆಯಿಂದಿಳಿದು ಮಗುವನ್ನು ನೋಡಿ ಸಂತೋಷಪಟ್ಟು ತನಗೆ ಮಕ್ಕಳಿಲ್ಲದಿದ್ದುದರಿಂದ ಅವನನ್ನೇ ತನ್ನ ಮಗನೆಂದು ಭಾವಿಸಿ ಊರಿಗೆ ಕರೆದುಕೊಂಡುಹೋಗಿ ಜಾತ ಕರ್ಮಾದಿಗಳನ್ನು ಮಾಡಿ ಚಂದ್ರಹಾಸನೆಂದು ಹೆಸರಿಡುವನು.

ಕತ್ತಲೆಯ ಮನೆಗೆ ಮಣಿದೀಪಮಾದಂತೆ ಸಲೆ
ಬತ್ತಿದ ಸರೋವರಕೆ ನವಜಲಮೊದವಿದಂತೆ
[4]ಚಿತ್ತರದ ಕಾವ್ಯರಚನೆಗೆ ದೇವತಾಸ್ತುತಿ [5]ನೆಗಳ್ದಂತೆ ಭೂತಳದೊಳು |
ಮತ್ತೆ ಸಂತಾನಮಿಲ್ಲದ ಕುಳಿಂದನ ಬಾಳ್ಕೆ
ಗುತ್ತಮಕುಮಾರನಾದಂ ಚಂದ್ರಹಾಸನೆನ
ಲುತ್ತರೋತ್ತರಮಪ್ಪುದಚ್ಚರಿಯೆ ದೇವಪುರ ಲಕ್ಷ್ಮೀವರನ ಭಕ್ತರು ||

---

[1] ರಕ್ತ. [2] ಸುರಿಯುತ್ತಿರುವ. [3] ಮೃಗಪಕ್ಷಿಗಳು. [4] ವಿಸ್ತಾರ ವಾದ. [5] ದೊರಕಿದ ಹಾಗೆ.

# ಪಾತ್ರರಚನೆ

ಪಾತ್ರಸೃಷ್ಟಿಯಲ್ಲಿ ಲಕ್ಷ್ಮೀಶನು ಚತುರ. ಅವನದು ತುಂಬು ಜೀವನ. ಜೀವನದ ಎಲ್ಲರೀತಿಯ ಎಲ್ಲಪಯಸ್ಸಿನ ಎಲ್ಲಸ್ವಭಾವದ ಜನಗಳನ್ನು ಅವನು ಪ್ರತ್ಯಕ್ಷ ನೋಡಿದ್ದಾನೆ. ಅವನ ಕಾವ್ಯದಲ್ಲಿ ಅವರ ಪ್ರತಿಬಿಂಬಗಳನ್ನೇ ಸೃಷ್ಟಿಸಿದ್ದಾನೆ. ಅವುಗಳ ಸ್ವಭಾವವೂ ವೈಶಿಷ್ಟ್ಯವೂ ಖಚಿತವಾಗಿದೆ. ಮೂಲದಲ್ಲಿ ಅವುಗಳಲ್ಲಿ ಕಾಣಬಹು ದಾದ ಅಲ್ಪವಾದರೂ ಪರಿಣಾಮಕಾರಿಯಾದ ಕುಂದುಕೊರತೆ ಗಳು ನಿವಾರಣೆಯಾಗಿ ಮಿರುಗಿಟ್ಟ ಸುವರ್ಣಪುತ್ಥಳಿಯಂತೆ ಪ್ರಕಾಶಮಾನವಾಗಿವೆ.

ಸುಧನ್ವನ ಪಾತ್ರವು ಇದಕ್ಕೆ ಉತ್ತಮನಿದರ್ಶನ. ಸುಧನ್ವನು ಚಂಪಕಾನಗರದ ಅರಸಾದ ಹಂಸಧ್ವಜನ ಮಗ. ಹಂಸಧ್ವಜನು ಏಕಪತ್ನೀವ್ರತಸ್ಥ, ಕೋಮಲ, ಮಾಕಾಂತಕಿಂಕರ, ಅಕೈತವ, ಬಲವಂತ, ಪರಾಕ್ರಮವಿಶಾರದ, ಸಂಗರವಿವೇಕಿ. ತನ್ನ ಈ ಗುಣ ಗಳೆಲ್ಲವೂ ತನ್ನ ಪ್ರಜೆಗಳಲ್ಲಿಯೂ ಇರಬೇಕೆಂದು ಕಟ್ಟಪ್ಪಣೆ ಯನ್ನು ಮಾಡಿದ್ದವನು. ಪ್ರಜೆಗಳೇ ಹೀಗಿದ್ದಾಗ ಅವನ ಮನೆ ಯವರ ವಿಷಯವನ್ನು ಕೇಳಬೇಕೆ? ಅವನ ಮೋಹದ ಕುಮಾರ ನಾದ ಸುಧನ್ವನು ಲೋಕೈಕವಿಖ್ಯಾತ, ಅಭಿಮಾನಿ, ಹರಿಸೇವಕ, ಸ್ಸುಂದರ, ಮಾತಾಪಿತೃಪ್ರಿಯ, ಕೋವಿದ, ಸುಖಿ, ಸಕಲಸಜ್ಜನ ಸಖ ನೀತಿವಿದ, ಆಚಾರಸಂಪನ್ನ. ಹಂಸಧ್ವಜನು ಇಂತಹವ ರೊಡನೆ ಸುಖವಾಗಿ ರಾಜ್ಯವಾಳುತ್ತಿರಲು ಅರ್ಜುನನ ಕುದುರೆಯು ಚಂಪಕಾನಗರಿಗೆ ಬಂದುದನ್ನು ನೋಡಿ ಅವನು ಕೃಷ್ಣದರ್ಶನಪ್ರಾಪ್ತಿಯಾಗುವುದೆಂಬ ಆಶೆಯಿಂದ ಆ ಕುದುರೆ ಯನ್ನು ಕಟ್ಟಿ ಅರ್ಜುನನೊಡನೆ ಯುದ್ಧಕ್ಕೆ ಸನ್ನದ್ಧನಾಗಿ ತನ್ನ ಪ್ರಜೆಗಳೆಲ್ಲರೂ ಕ್ಲಿಪ್ತಕಾಲದಲ್ಲಿ ಯುದ್ಧಕ್ಕೆ (ಕೃಷ್ಣಸಂದರ್ಶನಕ್ಕೆ)

ಸಿದ್ಧರಾಗಬೇಕೆಂದೂ ಹಾಗೆ ಮಾಡದೆ ಸಾವಕಾಶ ಮಾಡಿದವರಿಗೆ ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕುವ ಶಿಕ್ಷೆಯನ್ನು ವಿಧಿಸಲಾಗುವುದೆಂದೂ ಡಂಗುರಹಾಕಿಸುವನು. ರಾಜಾಜ್ಞೆಯಂತೆ ಪ್ರಜೆಗಳೆಲ್ಲರೂ ಸಕಾಲದಲ್ಲಿ ಸಿದ್ಧರಾಗುವರು. ಶೂರನಾದ ಸುಧನ್ವನೂ ತನ್ನ ಪರಾಕ್ರಮವನ್ನು ಪ್ರದರ್ಶಿಸಿ ಕೃಷ್ಣಸಂದರ್ಶನ ಮಾಡುವ ಸುಸಮಯವು ದೊರಕಿದುದಕ್ಕಾಗಿ ಸಂತೋಷಪಟ್ಟು ಆಹವಕ್ಕೆ ಪೊರಮಟ್ಟು ತನ್ನ ಮಾತೆಯೆಡೆಗೆ ಬಂದು ಸಾಷ್ಟಾಂಗವೆರಗಿ, 'ನೀನಾ ಹರಿಗೆ ವಿಮುಖನಾದೊಡೆ ಇಕ್ಕೆಲದ ಬಂಧುಗಳ್ ಜರೆವರೆನ್ನನ್, ಹರಿಯಂ ಕಂಡಬಳಿಕ ಹಿಮ್ಮೆಟ್ಟದಿರು' ಎಂದು ಹರಸಿದ ತಾಯಿಗೆ 'ಚಕ್ರಿಗೆ ವಿಮುಖನಾದೊಡೆ ನಿನ್ನ ಗರ್ಭದಿಂದುದಯಿಸಿದ ನಂದನನೆ? ಎನ್ನ ವಿಕ್ರಮವನಚ್ಯುತನ ಮುಂದೆ ತೋರಿಸುವೆನ್, ಇನಿತರ ಮೇಲೆ ಸೋಲು ಗೆಲವದು ಪುಣ್ಯವಶ'ಮೆಂದು ನುಡಿದು, ಅಷ್ಟರಲ್ಲಿಯೇ ಎದುರಿಗೆ ಬಂದು, ವಾತ್ಸಲ್ಯದಿಂದ ಆರತಿಯೆತ್ತಿ 'ಇಂದು ಶೌರಿಗೆ ವಿಮುಖನಾಗಿ ನೀಂ ಬಂದೆಯಾದೊಡೆ ಮಾವನ ಮನೆಯೊಳಾಂ ತಲೆಯೆತ್ತಿ ನಡೆವೆನೆಂತು? ಅದರಿಂದ ವನಜಾಕ್ಷನಂ ಮೆಚ್ಚಿಸಾಹವದೊಳ್' ಎಂದು ಕೇಳಿಕೊಂಡ 'ಸಹೋದರಿಗೆ ಭರವಸೆಯಿತ್ತು ಮುಂದೆ ಹೊರಡುವನು. ಸ್ವಲ್ಪ ಮುಂದೆ ಹೋಗುವಷ್ಟರಲ್ಲಿಯೇ ಅವನ ಮೋಹದ ಮಡದಿಯಾದ ಪ್ರಭಾವತಿಯು ಚಿನ್ನದ ತಟ್ಟೆಯಲ್ಲಿ ಸಂಪಗೆಯ ಹೂವನ್ನೂ ಸರಸಪರಿಮಳ ಗಂಧಕರ್ಪೂರಗಳನ್ನೂ ಇಟ್ಟುಕೊಂಡು ಅಂಗಜನ ಜಯಸಿರಿ ಬರುವಹಾಗೆ ಬರುವಳು. ಪ್ರಭಾವತಿ ಮುಗ್ಧೆ; ಜೀವನದಲ್ಲಿ ಪ್ರಣಯಸುಖವನ್ನು ಬಹಳ ಕಾಲ ಅನುಭವಿಸಿದವಳಲ್ಲ. ಪ್ರಣಯಫಲವಾದ ಸಂತಾನವನ್ನೂ ಕೂಡ ಪಡೆದಿಲ್ಲ. ಕೃಷ್ಣಸಂದರ್ಶನಕ್ಕೆ ಹೊರಟಿರುವ ಪತಿಯು ಹಿಂತಿರುಗುವ ಸಂಭವವೂ ಕಡಿಮೆ. ಅದೇ ಬಹುಶಃ ತಮ್ಮ

ಅಂತ್ಯಸಮಾಗಮವೆಂದು ಆಕೆಗೆ ಭಾಸವಾಗಿರಬೇಕು. ಅಲ್ಲದೆ ಆಗ ಅವಳಿಗೆ ಋತುದಾನಕ್ಕೆ ಯೋಗ್ಯವಾದ ಕಾಲ. ಇಂತಹ ಸಂದರ್ಭದಲ್ಲಿ ಪತಿಯ ಸಂಬಂಧವನ್ನು ಪಡೆಯುವುದು ಕರ್ತವ್ಯವೆಂದು ತಿಳಿದು ಅವನನ್ನು ಅದಕ್ಕಾಗಿ ಯಾಚಿಸುವಳು. ಕರ್ತವ್ಯನಿಷ್ಠನೂ ನೀತಿವಿದನೂ ಪ್ರೇಮದ ಮೂರ್ತಿಯೂ ಆದ ಸುಧನ್ವನು ಕರ್ತವ್ಯದ್ವಯದ ಮಧ್ಯೆ ಸಿಕ್ಕಿ ಡೋಲಾಯಮಾನಮಾನಸನಾಗುತ್ತಾನೆ. ಈ ತೆರನಾದ ಸನ್ನಿವೇಶದಲ್ಲಿ ಯಾವ ಪಾತ್ರದ ಮೇಲ್ಮೆಗೂ ಕುಂದುಬರದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುವುದು ಪ್ರತಿಭಾಶಾಲಿಯಾದ ಕವಿಯ ಕರ್ತವ್ಯ. ಮೂಲದಲ್ಲಿ ಈ ಭಾಗವು ಕಲಾರಹಿತವಾಗಿ ಕಾಣುವುದು. ಪ್ರಭಾವತಿಯು ತನ್ನ ಪ್ರಿಯನನ್ನು ಕುರಿತು ಋತುಸ್ನಾತೆಯಾದ ಭಾರ್ಯೆಯ ವಿಷಯದಲ್ಲಿ ಪತಿಯು ಅನುಸರಿಸಬೇಕಾದ ಕರ್ತವ್ಯ ವಿವೇಕಗಳನ್ನು ಕುರಿತು ದೀರ್ಘ ಭಾಷಣವನ್ನು ಮಾಡುವಳು. ಸುಧನ್ವನು ಅವಳ ಮನೋರಥವನ್ನು ಸಲ್ಲಿಸದಿರುವುದಕ್ಕೆ ತೃಪ್ತಿಕರವಲ್ಲದ ಕೆಲವು ಕಾರಣಗಳನ್ನು ಹೇಳಿ ಕೊನೆಗೆ ಪತ್ನಿಯ ವಿಶೇಷವಾದ ಬಲಾತ್ಕಾರದಿಂದ ಅವಳ ಪ್ರಾರ್ಥನೆಗೆ ಸಮ್ಮತಿಸುವನು. ಇದರಿಂದ ಪ್ರಭಾವತಿಯು ಅತಿ ಕಾಮಿಯಂತೆಯೂ ಲಜ್ಜಾವಿರಹಿತೆಯಂತೆಯೂ ಕಾಣುತ್ತಾಳೆ. ಸುಧನ್ವನು ಪ್ರೇಮಶೂನ್ಯನಂತೆಯೂ ಭೀರುವಿನಂತೆಯೂ ತೋರುತ್ತಾನೆ. ಲಕ್ಷ್ಮೀಶನು ಈ ಪ್ರಶ್ನೋತ್ತರಗಳನ್ನು ಪೂರ್ಣವಾಗಿ ಬಿಟ್ಟು ಶೃಂಗಾರಚೇಷ್ಟೆಯ ಬೆಡಗಿನಿಂದ ಮನದಾತುರವನ್ನು ತೋರಿದ ಪ್ರೇಯಸಿಯನ್ನು ಸುಧನ್ವನು ನೋಡಿ 'ಧರ್ಮಪದ್ಧತಿಯನೀಕ್ಷಿಸಲಿವಳನಿಂದು ಮೀರುವುದು ಮತವಲ್ಲ; ತಾತನಾಜ್ಞೆಯನುಳಿದು ಕೃಷ್ಣದರ್ಶನಕ್ಕೈದದೆ ಈ ತರಳೆಗಿಂದು ಋತುದಾನಮಂ ಮಾಡಿದೊಡೆ ಪಾತಕಂ ತನಗಿಲ್ಲ'ವೆಂದು

ನಿಶ್ಚೈಸಿ ಭೀತಿಯಂ ತೊರೆದು ಕಾಂತೆಯ ಇಷ್ಟಾರ್ಥಮಂ ಸಲ್ಲಿಸಿದನೆಂದು ಹೇಳುವುದು ಮನೋಜ್ಞವಾಗಿದೆ. ಅಲ್ಲದೆ ಯುದ್ಧರಂಗಕ್ಕೆ ತಡವಾಗಿ ಹೋದ ಸುಧನ್ವನು ಸರಿಯಾದ ಕಾರಣವನ್ನು ತಿಳಿಸಿದರೂ ಅವನ ಸ್ವಭಾವವನ್ನು ಚೆನ್ನಾಗಿ ತಿಳಿದಿದ್ದ ಹಂಸಧ್ವಜನು ಅವನನ್ನು ಕಾಮಿಯೆಂದೂ, ಕುಲ ಘಾತಕನೆಂದೂ ಸುತಾಧಮನೆಂದೂ ಬಯ್ದು ಛಟ್ಟಿಸಿದನೆಂದು ಮೂಲದಲ್ಲಿ ಹೇಳಿರುವುದು ಹಿತಕರವಾಗಿಲ್ಲ. ಅದೇ ವಿಷಯ ವನ್ನು ಲಕ್ಷ್ಮೀಶನು 'ಕೃತಕಮಿದು ನೂಕೀತನಂ ಕೃಷ್ಣದರ್ಶನ ಮೊದಗಿರಲೀತರಧರ್ಮದ ವೇಳೆ ಗಡ' ಎಂದು ಮುಗಿಸುವುದು ಸ್ವಾರಸ್ಯವಾಗಿದೆ.

ಹಾಗೆಯೇ ಮೂಲದಲ್ಲಿ ವೃಷಕೇತುವು ತಂದೆಯ ದುಷ್ಕಾರ್ಯವನ್ನು ಅನುವದಿಸಿರುವುದನ್ನೂ ಅನುಸಾಲ್ವನಿಗೆ ಸೋತು ಬಂದ ಕೃಷ್ಣನನ್ನು ಪ್ರದ್ಯುಮ್ನನು ಮೂದಲಿಸುವುದನ್ನೂ ಲಕ್ಷ್ಮೀಶನು ಬಿಟ್ಟಿರುವುದೂ ಸೀತಾಪರಿತ್ಯಾಗಕ್ಕೆ ಪೂರ್ವಭಾವಿಯಾಗಿ ದೋಹದ ವಿಚಾರವನ್ನು ರಾಮನೇ ಪ್ರಶ್ನೆಮಾಡಿದನೆಂದಿರುವುದನ್ನು ಸೀತೆಯೇ ರಾಮನನ್ನು ಪ್ರಶ್ನೆಮಾಡಿದಳೆಂದು ವ್ಯತ್ಯಾಸಮಾಡಿಕೊಂಡಿರುವುದೂ ಆ ಪಾತ್ರಗಳ ಮೇಲ್ಮೆಯನ್ನು ಹೆಚ್ಚಿಸುತ್ತದೆ.

ಇವೇ ಅಲ್ಲದೆ ಕಾವ್ಯದ ಮಧ್ಯದಲ್ಲಿ ವಿಶೇಷವಲ್ಲದಿದ್ದರೂ ಉಚಿತವಾದ ಸಣ್ಣಸಣ್ಣ ಮಾರ್ಪಾಟುಗಳನ್ನು ಮಾಡಿಕೊಂಡು ಲಕ್ಷ್ಮೀಶನು ಬಭ್ರುವಾಹನನ ಸ್ಥಿರಸಂಕಲ್ಪ, ತಾಮ್ರಧ್ವಜನ ಸಾಹಸ, ಮಯೂರಧ್ವಜನ ಸತ್ಯಸಂಧತೆ, ಚಂದ್ರಹಾಸನ ಧರ್ಮನಿಷ್ಠತೆ—ಇವುಗಳು ಸ್ಫುಟವಾಗಿ ಎದ್ದು ಕಾಣುವಂತೆ ಮಾಡಿದ್ದಾನೆ. ಅವನ ಪುರುಷಪಾತ್ರಗಳಂತೆಯೇ ಸ್ತ್ರೀಪಾತ್ರಗಳೂ ಮನೋಹರವಾಗಿವೆ. ರಸಿಕಶಿರೋಮಣಿಯಾದ ಸತ್ಯ

ಭಾಮೆ, ಪ್ರತೀಕಾರಮೂರ್ತಿಯಾದ ಜ್ವಾಲೆ, ಪ್ರೇಮಪುತ್ತಳಿಯಾದ ಪ್ರಭಾವತಿ, ವೀರರಮಣಿಯಾದ ಪ್ರಮೀಳೆ, ಸಾಧ್ವೀಮಣಿಯಾದ ಸೀತೆ, ಇವರೊಬ್ಬೊಬ್ಬರೂ ತಮ್ಮ ಪ್ರತ್ಯೇಕವಾದ ಗುಣಗಳಿಂದ ವಾಚಕರ ಗೌರವಕ್ಕೆ ಪಾತ್ರರಾಗಿದ್ದಾರೆ.

---

## ಲಕ್ಷ್ಮೀಶನ ಉಪಮಾನಗಳು

ಉತ್ತಮ ಉಪಮಾನಗಳು ಲಕ್ಷ್ಮೀಶನ ಕಾವ್ಯದ ಜೀವಾಳ. ಅವುಗಳು ನಾನಾಜಾತಿಗೆ ಸೇರಿದುವು. ಮಾನವನ ನಿತ್ಯವ್ಯವಹಾರದಿಂದ ಆಯ್ದುವು ಕೆಲವು; ಪ್ರಕೃತಿ ಜೀವನಕ್ಕೆ ಸಂಬಂಧಪಟ್ಟವು ಕೆಲವು; ಎಲ್ಲರಿಗೂ ಪರಿಚಿತವಾಗಿ ಜನಸಾಮಾನ್ಯದಲ್ಲಿ ನಲಿದಾಡುತ್ತಿರುವ ಗಾದೆಗಳಂತಿರುವುವು ಕೆಲವು. ಇವುಗಳನ್ನು ಶೇಖರ ಮಾಡುವುದರಲ್ಲಿ ಅವನಿಗೆ ವಿಶೇಷ ಶ್ರಮವಾದಂತೆ ತೋರುವುದಿಲ್ಲ. ಅವನಿಗೆ ಸ್ವತಃ ಪೂರ್ಣವಾದ ಲೋಕಾನುಭವವಿತ್ತು. ಅದಕ್ಕಿಂತ ಹೆಚ್ಚಾಗಿ ಅವನಿಗೆ ಆಧಾರವಾದ ಸಂಸ್ಕೃತ ಜೈಮಿನಿಭಾರತವು ರೂಪಕಗಳ ಗಣಿಯೆಂದು ಹೇಳಬಹುದು. 'ಖಳರ ಪುರುಷಾರ್ಥಮಂ ಕಾಮಿಸುವ ಯಾಚಕಾವಳಿಯಂತೆ' 'ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ' '[1]ಪೆರೆಯುರ್ಚಿದುರುಗನಂತೆ' 'ಕದಳಿಮುರಿದಿಳೆಗೊರಗುವಂತೆ' 'ಬಹುದುರಿತಮಂ ಸ್ವಧರ್ಮದೊಳೊರಸುವಂತೆ' 'ಅಜಾಗಳಸ್ತನದಂತೆ' '[2]ಸ್ವರ್ಮಣಿ ಧರಾತಳಕೆ ನಭದಿಂ ಬೀಳ್ವಂತೆ' 'ಕರುವನೇಳಗಂದಿ ಶಾನರಸುವಂತೆ' 'ತಾಯನೆಳಗರು [3]ಬಿಚ್ಚುವಂತೆ' 'ವಾತ್ಸಲ್ಯಮೆಂಬ [4]ಬಲ್ಗಣ್ಣಿಯೊಳ್ ಕಟ್ಟುವಡೆದು'

---

[1] ಪೊರೆಬಿಟ್ಟ ಹಾವಿನ ಹಾಗೆ, [2] ಸೂರ್ಯ. [3] ಅಗಲುವ ಹಾಗೆ, [4] ಬಲವಾದ ಹಗ್ಗ.

'ಕಾಲಸಂ ಪೆಣಂ ಬೆಸ್ನಟ್ಟಿಪೋಪಂತೆ' ಮೊದಲಾದ ಉಪಮಾನಗಳು ಮೂಲದಿಂದ ಭಾಷಾಂತರ ಮಾಡಿದುವು. ಲಕ್ಷ್ಮೀಶನು ಉಪಯೋಗಿಸಿಕೊಳ್ಳದಿರುವ ಅನೇಕ ಸೊಗಸಾದ ಉಪಮಾನಗಳು ಮೂಲದಲ್ಲಿವೆ. ಮಾದರಿಗಾಗಿ ಮುಂದಿನ ಕೆಲವನ್ನು ನೋಡಬಹುದು—'[1]ಕ್ಷೀರಾರ್ಣವಂ ಭವಾನ್ಪ್ರಾಪ್ಯ ಕಿಮಜಾಂ ದೋಗ್ಧುಮಿಚ್ಛತಿ' '[2]ಪರಿತ್ಯಜ್ಯೋದಿತಂ ಸೂರ್ಯಂ ಖದ್ಯೋತಂ ಕಾಂಕ್ಷತೇ ಕಥಂ' '[3]ತೈಲಂ ಸುಶೀತಲಂ ಜಾತಂ ಸಜ್ಜನಸ್ಯೇವ ಮಾನಸಂ' '[4]ಯಥಾಜಲೇ ಪಂಕಜವತ್ಪ್ರಪುಲ್ಲಮ್' '[5]ಕೂಶ್ಮಾಂಡಫಲವದ್ಛೇದ್ಯಾ ರಥಾಶ್ಛೇದ್ಯಾ ರಸಾಲವತ್| ಶಿರಾಂಸಿ ಪಕ್ವಫಲವತ್ ಪಾತನೀಯಾನಿ ಭೂತಲೇ.' ಇವುಗಳನ್ನು ಓದುವಾಗ ಲಕ್ಷ್ಮೀಶನು ಇವುಗಳನ್ನೂ ಉಪಯೋಗಿಸಿಕೊಂಡಿದ್ದರೆ ಚೆನ್ನಾಗಿತ್ತೆನ್ನಿಸುತ್ತದೆ.

ಲಕ್ಷ್ಮೀಶನ ಪ್ರತಿಭೆಯೂ ಲೋಕಾನುಭವವೂ ಪ್ರಕಟವಾಗುವುದು ಅವನು ಸ್ವಂತವಾಗಿ ರಚಿಸಿರುವ ಉಪಮಾನಗಳಲ್ಲಿ. ಅವುಗಳು ನಿಜವಾಗಿಯೂ ಬಹು ಹೃದಯಂಗಮವಾಗಿವೆ. ವೇದವ್ಯಾಸಮುನಿಗಳನ್ನು ಕಂಡ ಧರ್ಮರಾಯನು 'ಅನಿಲ ಸಂಚಾರಮೊಂದಿನಿಸಿಲ್ಲದುರಿವ ಕಡುವೇಸಗೆಯ ಬಿಸಿಲಿನಿಂದ ಬಸವಳಿದ ಕೋಮಲ ರಸಾಲ'ದಂತಿದ್ದನಂತೆ. ಸರಸಿಯಿಂದ ಊರಿಗೆ ಮರಳುವ ತೇಜಿಗಳು 'ಕಾರ್ಗಾಲದಬ್ದಮಾಲೆಗಳನುಸರಣಿಯೊಳ್'

---

[1] ಕ್ಷೀರಸಮುದ್ರವು ದೊರಕಿರುವಾಗ ಆಡನ್ನು ಕರೆಯಲು ಇಚ್ಛಿಸುತ್ತೀಯಾ. [2] ಬಾಲಸೂರ್ಯನನ್ನು ಬಿಟ್ಟು ಮಿಂಚುಹುಳುವಿಗೆ ಆಶಿಸುವರೇ. [3] ಎಣ್ಣೆಯು ಸತ್ಪುರುಷರ ಮನಸ್ಸಿನ ಹಾಗೆ ಶಾಂತವಾಯಿತು. [4] ನೀರಿನಲ್ಲಿರುವ ಕಮಲದ ಹಾಗೆ ಅರಳಿತು. [5] ಸೈನ್ಯವನ್ನು ಕುಂಬಳಕಾಯಿನ ಹಾಗೆ ಒಡೆಯಬೇಕು; ರಥಗಳನ್ನು ಮಾವಿನಮರದ ಹಾಗೆ ಕತ್ತರಿಸಬೇಕು; ತಲೆಗಳನ್ನು ಕಳಿತ ಹಣ್ಣಿನ ಹಾಗೆ ಉದುರಿಸಬೇಕು.

ತಾಗರ್ೂಡುತೆತ್ತಲುಂ ನಿಬಿಡಮಪ್ಪಂತ್ತಿ'ದ್ದವಂತೆ. ತುರಗವನ್ನು ಕಂಡ ಪವನಜನು 'ವಿಧುಬಿಂಬದುದಯಮಂ ಕಂಡೊತ್ತರಿಸಿ ಪಯೋನಿಧಿ ಮೇರೆವರಿದುಕ್ಕುವಂತೆ' ಸುಮ್ಮಾನವನ್ನು ತಾಳ್ದಿದನಂತೆ. ಗಗನಮಣಿ 'ಪಶ್ಚಿಮಾಂಗನೆಯ ಬೈತಲೆಯ [1]ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿ ಮಸ್ತಕದೊಳು.' 'ಹೊಳೆ ಹೊಳೆವ ಮಿಂಚಿನ ಗೊಂಚಲೆತ್ತಲುಂ ಬಳಸಿ ಕಂಗೊಳಿಸುತಿರಲ್ ಅಡಿಗಡಿಗೆ ಘುಡುಘುಡಿಸಿ ಮೊಳಗುವಸಿತಾಭ್ರಮಂ ಕುಲಗಿರಿಶಟಿಪ್ರದೇಶಕೆ ಸಾರ್ಚುವನಿಲನಂತೆ' ಸುವೇಗನು ಲಲಿತ ಕನಕಾಭರಣ ಕಾಂತಿಯಿಂದಲೂ ಸುಗತಿಗುಲಿವ ಹೊಂಗೆಜ್ಜೆಗಳ ರಭಸದಿಂದಲೂ ಎಸೆವ ನಿರ್ಮಲವಾಜಿಯನ್ನು ಧರ್ಮರಾಯನ ಮುಂದೆ ತಂದು ನಿಲಿಸಿದನು. 'ಪಚ್ಚೆಲೆಯ ತರುವನ್ ಒಣಗಿದ ಪೊದೆಯ ಕಾಳ್ಕಿಚ್ಚು ಕೊಂಡುರಿವವೊಲ್' ಜ್ವಾಲೆಯು ಗಂಗಾದೇವಿಗೆ ಅರ್ಜುನನ ಮೇಲೆ ಕೋಪ ಬರುವ ಹಾಗೆ ಮಾಡಿದಳು. 'ತೊಳಲುತರಸುವ ಬಳ್ಳಿ ಕಾಲ್ತೊಡಕಿದಂತೆ'ಯಾದ ವರೆರೆಯನಾದ ಶ್ರೀಕೃಷ್ಣನು ಧರ್ಮರಾಯನಲ್ಲಿಗೆ ತಾನಾಗಿಯೇ ಬಂದು ಸೇರಿದನು. 'ತಳಿರೆಡೆಯೊಳಿರ್ದ ಮಾವಿನ ತೋರ ತಣಿವಣ್ಣಂ ಗಿಳಿ ಕರ್ದುಂಕಿದೊಡೆ ರಸವೊಸರಿ ಸೋರ್ವಂತೆ ಹೆಂಗಳ ಕರತಳದ ಪೊಂಗಳಸದ ಬುಳಿಗೆಯೊಳಿಟ್ಟ ಬೆರಳಂ ತೆಗೆದು ಬಿಡಲ್ಕೆ ಲಲಿತ ಚಂಪಕ ತನುಚ್ಛಾಯೆಯಿಂ ಕೆಂಪಿಡಿದ ಜಳಧಾರೆ ಕಂಗೊಳಿಸುತಿರ್ದುದು.' ಲಕ್ಷ್ಮಣನ ಮನಸ್ಸು 'ತೂಗುಯ್ಯಾಲೆವೊಲಾ'ದುದು. ವಿಶೇಷವಾಗಿ ಹುಡುಕಿದರೂ ಕುದುರೆಯು ಸಿಕ್ಕದಿರಲು ಭೀಮನು 'ಕಲಹದೊಳ್ ಮುನಿದ ಕಾಂತೆಯ ಕುಪಿತವದನಾರವಿಂದದೊಳ್ ಮಿಸಗುವ ಎಳನಗೆ ತೋರುವನ್ನೆಗಂ ಚಿತ್ತದೊಳ್ ಕುದಿವ ನಾಗರಿಕನಂತೆ' ಉಬ್ಬೆಗದಿಂದ ಚಿಂತಿಸು

[1] ಕಪ್ಪು ನೋಡ.

ತ್ತಿದ್ದನು. ಲಕ್ಷ್ಮೀಶನಲ್ಲಿ ಇಂತಹ ಇನ್ನೂ ಅನೇಕ ಉಪಮಾನಗಳಿವೆ. ಇವುಗಳೆಲ್ಲ ಸುಲಭವಾಗಿ ವಾಚಕರಿಗೆ ಅರ್ಥವಾಗುವಂತಿವೆ. ಇವುಗಳಲ್ಲಿ ಪೂರ್ಣ ಓಜಸ್ಸಿದೆ. ಇವುಗಳಿಂದ ಉಪಮೇಯದ ಪೂರ್ಣ ಪರಿಚಯವಾಗುವಂತಿದೆ.

---

## ಕವಿಯ ಪರಿಚಯ

ಕಾವ್ಯದ ಪರಿಚಯವಾದ ಮೇಲೆ ಕವಿಯ ಪರಿಚಯವನ್ನು ಸಾಧ್ಯವಾದಷ್ಟು ಮಾಡಿಕೊಡುವುದು ಆವಶ್ಯಕ. ಇತರ ಎಷ್ಟೊ ಕವಿಗಳ ಹಾಗೆ ಲಕ್ಷ್ಮೀಶನ ಕಾಲದೇಶಗಳ ವಿಷಯವಾಗಿಯೂ ನಿಷ್ಕೃಷ್ಟವಾಗಿ ಏನನ್ನೂ ಹೇಳುವ ಹಾಗಿಲ್ಲ. ಕವಿಯೇ ತನ್ನ ಗ್ರಂಥದಲ್ಲಿ ಸ್ವವಿಷಯವಾಗಿ ವಿಶೇಷವಾಗಿ ಹೇಳಿಕೊಂಡಿಲ್ಲ. ಪೀಠಿಕಾಸಂಧಿಯ ಆಧಾರದ ಮೇಲೆ ಆತನು ಅಣ್ಣಮಾಂಕನ ಸುತನೆಂದೂ ಭರದ್ವಾಜಗೋತ್ರದವನೆಂದೂ 'ಕರ್ಣಾಟಕವಿ ಚೂತವನಚೈತ್ರ' ಎಂಬ ಬಿರುದುಳ್ಳವನೆಂದೂ ದೇವಪುರದ ಲಕ್ಷ್ಮೀರಮಣನ ಭಕ್ತನೆಂದೂ ಹೇಳಬಹುದು. ಇಲ್ಲಿ ಉಕ್ತವಾಗಿರುವ ದೇವಪುರವಾವುದೆಂಬುದರಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಸಾಮಾನ್ಯವಾಗಿ ಜನಜನಿತವಾದ ಅಭಿಪ್ರಾಯದ ಪ್ರಕಾರವೂ ದೇವನೂರಿನ ಸ್ಥಳಪುರಾಣ ಪ್ರಕಾರವೂ ಹಾಸನ ಡಿಸ್ಟ್ರಿಕ್ಟ್ ಅರಸೀಕೆರೆ ತಾಲ್ಲೋಕಿನಲ್ಲಿರುವ ದೇವನೂರೇ ಲಕ್ಷ್ಮೀಶನ ಸ್ಥಳವಿರಬೇಕೆಂದು ನಿರ್ಧರವಾಗಿದೆ. ಆದರೆ ಕೆಲವು ಪಂಡಿತರು ಹೈದರಾಬಾದ್ ಸಂಸ್ಥಾನದಲ್ಲಿರುವ ಸುರಪುರವು ಲಕ್ಷ್ಮೀಶನ ದೇವನೂರಿರಬಹುದೆಂದು ಶಂಕಿಸಿದ್ದಾರೆ. ಈ ವಿಷಯವು ನಿರ್ಧರವಾಗಿ ಇತ್ಯರ್ಥವಾಗಿಲ್ಲವಾದುದರಿಂದ ಇದುವರೆಗೆ

ಬಹುಮತದಿಂದ ಅಂಗೀಕೃತವಾಗಿರುವ ದೇವನೂರೇ ಕವಿಯ ಸ್ಥಳವೆಂದು ಇಟ್ಟುಕೊಳ್ಳಬಹುದು.

ಇವನ ಕಾಲದ ವಿಷಯವು ಇನ್ನೂ ಹೆಚ್ಚಿನ ಚರ್ಚೆಗೆ ಕಾರಣವಾಗಿದೆ. ಪಂಡಿತರನೇಕರು ಈ ವಿಷಯವನ್ನು ಬೇರೆ ಬೇರೆ ದೃಷ್ಟಿಗಳಿಂದ ವಿಚಾರಮಾಡಿದ್ದರೂ ಹಿಡಿತಕ್ಕೆ ಸಿಕ್ಕುವ ಖಚಿತವಾದ ಆಧಾರಗಳಿಂದ ಯಾವ ಸಿದ್ಧಾಂತಕ್ಕೂ ಬಂದಿಲ್ಲ. ಇವನ ಕಾಲವು ಕ್ರಿ.ಶ. ೧೧೪೭ ರಿಂದ ೧೭೬೦ ರ ಮಧ್ಯಕಾಲದಲ್ಲಿ ತೂಗಾಡುತ್ತಿದೆ. ಈಗ ಸಿಕ್ಕಿರುವ ಆಧಾರಗಳ ಮೇಲೆ ಇವನು ಕ್ರಿ.ಶ. ೧೫೮೦ ಕ್ಕಿಂತ ಹಿಂದೆ ಇದ್ದವನೆಂದು ಸ್ಥೂಲವಾಗಿ ಹೇಳಬಹುದು.

ಕವಿಯು ತನ್ನ ಗ್ರಂಥದಲ್ಲಿ ಹೇಳಿರುವ ಕೆಲವು ಮಾತುಗಳ ಆಧಾರದ ಮೇಲೆ ಇವನು ಶೈವನೆ ಅಥವಾ ವೈಷ್ಣವನೆ ಎಂಬುದಾಗಿ ಅನೇಕರು ವಿಚಾರಮಾಡಲು ಹೊರಟಿದ್ದಾರೆ. ಅದನ್ನು ಅಷ್ಟು ಸುಲಭವಾಗಿ ನಿಷ್ಕರ್ಷೆಮಾಡಲು ಸಾಧ್ಯವಿಲ್ಲ. ಅವನು ಶೈವವೈಷ್ಣವ ವ್ಯತ್ಯಾಸವನ್ನು ಮಾಡದ ಭಾಗವತ ಸಂಪ್ರದಾಯದವನೆಂದು ಸದ್ಯದಲ್ಲಿ ನಂಬಬಹುದು.

—

# ಕೊನೆಯ ಮಾತು

ಲಕ್ಷ್ಮೀಶನ ಕಾವ್ಯದ ಇದುವರೆಗಿನ ಸ್ಥೂಲಪರಿಚಯದಿಂದ ಕನ್ನಡಕಾವ್ಯಪ್ರಪಂಚದಲ್ಲಿ ಅವನ ಸ್ಥಾನವೆಂತಹುದೆಂಬುದು ಮಂದಟ್ಟಾಗಿರಬೇಕು. ಅವನು ಪ್ರಥಮತಃ ಪಂಡಿತ. ಸಂಪ್ರದಾಯಶರಣ. ಉತ್ತಮಸಂಗ್ರಾಹಕ. ಮೇಲ್ಮಟ್ಟದ ಕತೆಗಾರ. ಕೃಷ್ಣನ ಮಹಿಮೆಯನ್ನು ಲೋಕಕ್ಕೆ ಹರಡುವುದಕ್ಕಾಗಿ ಪ್ರಾಚೀನ ಪುರಾಣವೊಂದರ ಆಧಾರದ ಮೇಲೆ ಅದರ ಆಶಯವೂ ಸೌಂದರ್ಯವೂ ಕೆಡದಂತೆ ಕನ್ನಡದಲ್ಲಿ ಒಂದು ಮಹಾ ಕಾವ್ಯವನ್ನು ರಚಿಸಿದ್ದಾನೆ. ಅದರಲ್ಲಿ ಜನಮೆಚ್ಚುವ ಅನೇಕ ಗುಣಗಳಿವೆ. ಅದು ಪಂಡಿತಪಾಮರರಿಬ್ಬರಿಗೂ ಪ್ರಿಯವಾಗಿ ನೂರಾರು ವರ್ಷಗಳಿಂದ ಕರ್ಣಾಟಕದಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಅದರ ಸವಿಯನ್ನು ಅನೇಕರು ಕಂಡುಂಡು ತೃಪ್ತಿಪಟ್ಟಿದ್ದಾರೆ; ಪಡುತ್ತಲೂ ಇದ್ದಾರೆ. ಕಾಲವ್ಯತ್ಯಾಸದಿಂದ ಇದರ ವಿಷಯದಲ್ಲಿ ಉಂಟಾಗಿರುವ ಅನಾದರವನ್ನು ಬಿಟ್ಟು, ಮೊದಲಿನಂತೆ ಇದರ ರಸಾಸ್ವಾದನೆ ಮಾಡುವುದು ಎಲ್ಲ ಕನ್ನಡಿಗರ ಕರ್ತವ್ಯ.